# ಸಿದ್ಧಾಂತಶಿಖಾಮಣಿ

# ಪ್ರವಚನ ಪ್ರಭೆ

## ಪೂರ್ವಪೀಠಿಕಾ





ಶ್ರೀ ಷ.ಬ್ರ.ಡಾ. ಚಂದ್ರಶೇಖರ ಶಿವಾಚಾರ್ಯ ಸ್ವಾಮಿಗಳು
ಎಂ.ಎ., ಪಿಹೆಚ್.ಡಿ.

ಶ್ರೀಗುರು ಅಮರೇಶ್ವರಗ್ರಂಥಮಾಲೆ-೭ ನೇ ಕುಸುಮ

"ಸಿದ್ಧಾಂತಶಿಖಾಮಣಿ"

# ಪ್ರವಚನಪ್ರಭೆ

(ಪೂರ್ವಪೀಠಿಕಾ)

"ಸರ್ವದರ್ಶನತೀರ್ಥ", "ವಿದ್ಯಾವಾರಿಧಿ"
ಶ್ರೀ॥ಷ॥ಬ್ರ॥ ಡಾ. ಚಂದ್ರಶೇಖರಶಿವಾಚಾರ್ಯಮಹಾಸ್ವಾಮಿಗಳು,
ಎಂ.ಎ., ಪಿಎಚ್.ಡಿ.



ಶ್ರೀಗುರು ಅಮರೇಶ್ವರಪ್ರಕಾಶನ, ಅಮರೇಶ್ವರಮಠ
ಗುಳೇದಗುಡ್ಡ-೫೮೭೨೦೩
೧೯೮೭

" Siddhanta Shikhamani " " PRAVACHANA PRABHE "
" Poorva Peethika "
by H. H. Dr. Chandrashekhara Shivacharya Swamiji
Published by: SRI GURU AMARESHWAR PRAKASHAN
Amareshwarmath, GULEDGUDDA-587203
Dist. Bijapur-Karnatak. 1986



Price Rs. 12/-.

ಪ್ರಥಮ ಮುದ್ರಣ : ---೧೫೦೦ ಪ್ರತಿಗಳು



ದಾನಿಗಳು :

ಶ್ರೀಮಾನ್ ಹೆಚ್. ಜಂಬಣ್ಣನವರು, ಬಳ್ಳಾರಿ
ಇವರ ಧರ್ಮಪತ್ನಿ ಲಿಂ. ಸೌ. ಗಿರಿಜಮ್ಮನವರ ಜ್ಞಾಪಕಾರ್ಥ

ಬೆಲೆ : ಹನ್ನೆರಡು ರೂಪಾಯಿಗಳು

ಮುದ್ರಕರು: ... ಶ್ರೀ ... ಎಲೆಕ್ಟ್ರಿಕ್ ಪ್ರೆಸ್, ಮೈಸೂರು

# ಅರ್ಪಣೆ



ಬಾಲ ಬ್ರಹ್ಮಚಾರಿಗಳೂ, ಪ್ರಕಾಂಡಪಂಡಿತರೂ,
"ಪಂಚಾಚಾರ್ಯಪ್ರಭಾ" ಪತ್ರಿಕಾ ಸಂಸ್ಥಾಪಕರೂ,
ವೀರಶೈವ ತತ್ತ್ವಪ್ರಚಾರಕರೂ, ಲೋಕಮಾನ್ಯರೂ
ನಾಗನೂರು ಬೃಹನ್ಮಠಾಧ್ಯಕ್ಷರೂ ಆದ

**ಲಿಂ॥ ಪಂ॥ ಕಾಶೀನಾಥಶಾಸ್ತ್ರಿಗಳವರ**

೩೭ ನೇ ಪುಣ್ಯತಿಥಿಯ ಸ್ಮರಣಾರ್ಥವಾಗಿ ಅವರ ಕರಕಮಲಗಳಲ್ಲಿ
ಈ ಗ್ರಂಥಕುಸುಮವನ್ನು ಸಮರ್ಪಿಸಲಾಗಿದೆ.

॥ ಶ್ರೀಜಗದ್ಗುರು ಪಂಚಾಚಾರ್ಯಾಃ ಪ್ರಸೀದಂತು ॥



## ಶ್ರೀಕಾಶೀ ಜ್ಞಾನಸಿಂಹಾಸನಾಧೀಶ್ವರ ಶ್ರೀ ೧೦೦೮ ಜಗದ್ಗುರು ಶ್ರೀ ಶ್ರೀ ವಿಶ್ವೇಶ್ವರಶಿವಾಚಾರ್ಯಮಹಾಸ್ವಾಮಿಗಳವರ

# ಶುಭಾಶೀರ್ವಚನ

ಷ॥ ಬ್ರ॥ ಡಾ. ಚಂದ್ರಶೇಖರಶಿವಾಚಾರ್ಯಸ್ವಾಮಿಗಳು ಸಿದ್ಧಾಂತ ಶಿಖಾಮಣಿಯ ನೂರೊಂದು ಸ್ಥಲಗಳಿಗೆ ಪ್ರವಚನಶೈಲಿಯ ನೂರೊಂದು ಪುಸ್ತಕಗಳನ್ನು ಬರೆಯುವುದಾಗಿ ಸಂಕಲ್ಪಿಸಿ, ಈಗಾಗಲೇ ಪಿಂಡಸ್ಥಲದಿಂದ ಗುರುಕಾರುಣ್ಯಸ್ಥಲದವರೆಗೆ ನಾಲ್ಕು ಚಿಕ್ಕ ಗ್ರಂಥಗಳನ್ನು ಪ್ರಕಾಶನಗೊಳಿಸಿ ವಾಚಕರ ಪ್ರೇಮವನ್ನು ಸಂಪಾದಿಸಿದ್ದಾರೆ. ಪ್ರಸ್ತುತವಾದ ' ಪೂರ್ವಪೀಠಿಕಾ ' ಎಂಬ ಈ ಗ್ರಂಥವು, ಸಿದ್ಧಾಂತಶಿಖಾಮಣಿಯ ಪ್ರಥಮಪರಿಚ್ಛೇದದ ಶಿವಸ್ತುತಿ ಯಿಂದ ಪ್ರಾರಂಭವಾಗಿ ಐದನೇ ಪರಿಚ್ಛೇದದ ೩೦ ಶ್ಲೋಕಗಳ ಪರ್ಯಂತವಾದ ಗ್ರಂಥಭಾಗದ ಸಮಗ್ರಶ್ಲೋಕಗಳ ಶಬ್ದಾರ್ಥ ಮತ್ತು ತಾತ್ಪರ್ಯವನ್ನೊಳ ಗೊಂಡಿದೆ. ಅಲ್ಲದೇ, ಅಲ್ಲಲ್ಲಿ ಈ ಲೇಖಕರು ವಿಶೇಷ ವಿಚಾರಗಳನ್ನು ಪ್ರಸ್ತಾಪಿಸಿ, ವಾಚಕರ ಜಿಜ್ಞಾಸಾರೂಪವಾದ ಪಿಪಾಸೆಯನ್ನಡಗಿಸಲು ಪ್ರಯತ್ನಿಸಿದ್ದಾರೆ. ವೀರಶೈವಸಿದ್ಧಾಂತದ ಮೂವತ್ತಾರು ತತ್ತ್ವಗಳ ಸ್ವರೂಪವನ್ನು ಶ್ರೀಸ್ವಾಮಿಗಳು ಹೃದಯಂಗಮವಾಗಿ ಬಿತ್ತರಿಸಿದ್ದಾರೆ. ಸಿದ್ಧಾಂತ ಶಿಖಾಮಣಿಯ ಮೂಲ ಲೇಖಕರಾದ ಶ್ರೀಶಿವಯೋಗಿಶಿವಾಚಾರ್ಯರ ಕಾಲಮಾನದಬಗ್ಗೆ ಚರ್ಚೆರೂಪ

ದಲ್ಲಿ ಇರುವ ಶ್ರೀ ಸ್ವಾಮಿಗಳ ಮೊದಲ್ನುಡಿಯು ಪಂಡಿತಮಾನ್ಯವಾಗಿದೆ. ಉಪದೇಶಾತ್ಮಕವಾದ ಪಿಂಡಸ್ಥಲಕ್ಕಿಂತಲೂ ಪೂರ್ವದ ಗ್ರಂಥಭಾಗದ ವಿಶ್ಲೇಷಣಾತ್ಮಕವಾದ ಈ ಗ್ರಂಥಕ್ಕೆ "ಸಿದ್ಧಾಂತಶಿಖಾಮಣಿ ಪ್ರವಚನಪ್ರಭೆ" "ಪೂರ್ವಪೀಠಿಕಾ" ಎಂಬ ಹೆಸರನ್ನಿಟ್ಟದ್ದು ಸಾರ್ಥಕವೇ ಸರಿ. ಜಿಜ್ಞಾಸು ವಾಚಕರು ಎಲ್ಲ ವಿಷಯುಗಳನ್ನು ಸಾವಧಾನಪೂರ್ವಕವಾಗಿ ಮನನಮಾಡಿಕೊಂಡು ಮನಸ್ಸಿನ ನೆಮ್ಮದಿಯನ್ನು ಪಡೆಯಲೆಂದು ಹಾರೈಸುತ್ತೇವೆ.

ಮಹಾಶಿವರಾತ್ರಿ
ತಾ॥ ೮—೩—೧೯೮೬.

ಶಿವಂ ಭೂಯಾತ್,
ಇತ್ಯಾಶಿಷಃ.

ಶ್ರೀಮನ್ನಿರಂಜನ ಜಗದ್ಗುರು
ತೋಂಟದ ಸಿದ್ಧಲಿಂಗ ಮಹಾಸ್ವಾಮಿಗಳವರು,
ಶ್ರೀ ತೋಂಟದಾರ್ಯ ಸಂಸ್ಥಾನ ಮಠ ಡಂಬಳ, ಗದಗ, ಇವರ

## ಆಶೀರ್ವಚನ

ಶ್ರೀ ಷ. ಬ್ರ. ಡಾ॥ ಚಂದ್ರಶೇಖರಶಿವಾಚಾರ್ಯರು, ಅಮರೇಶ್ವರಮಠ, ಗುಳೇದಗುಡ್ಡ–ಇವರಿಂದ ಸಿದ್ಧಾಂತಶಿಖಾಮಣಿ ಕುರಿತು ಮಾಡಿದ ಪ್ರವಚನಗಳು ಗ್ರಂಥರೂಪದಿಂದ ಈಗಾಗಲೇ ಕಿರಣ ೧–೨ ರೂಪದಲ್ಲಿ ಪ್ರಕಟವಾಗಿದ್ದು, ಇದೀಗ ೩–೪ ನೇ ಕಿರಣಗಳೂ ಸಹ ಹೊರಬಂದು ನಮ್ಮ ಕೈಸೇರಿವೆ. ಇದೀಗ ' ಪೂರ್ವಪೀಠಿಕಾ ' ಎಂಬ ಕೃತಿಯೂ ಹೊರಬರುತ್ತಿದೆ.

ಶಿವಾಂಶನಾದ ಜೀವನು ಲಿಂಗಾಂಗಯೋಗದ ಮೂಲಕ ತನ್ನ ಜೀವಭಾವ ನೀಗಿಕೊಂಡು, ಪುನಃ ತನ್ನ ಮೂಲಸ್ವರೂಪವಾದ ಶಿವಭಾವದಲ್ಲಿ ನಿಲ್ಲುವದೇ ಷಟ್‌ಸ್ಥಲಸಿದ್ಧಾಂತದ ಮೂಲ ಗುರಿಯಾಗಿದೆ. ಪಕ್ಷಿಗಳು ಆಕಾಶದಲ್ಲಿ ಉಡ್ಡಾಣ ಮಾಡಲಿಕ್ಕೆ ಅವುಗಳ ಎರಡೂ ರೆಕ್ಕೆಗಳು ಅವುಗಳಿಗೆ ಸಹಾಯವಾಗುವಂತೆ, ವೀರಶೈವ ಸಿದ್ಧಾಂತದಲ್ಲಿ ಕ್ರಿಯಾ–ಜ್ಞಾನಗಳೆರಡೂ ಪ್ರಾಧಾನ್ಯ ಪಡೆದಿವೆ. ಆದ್ದರಿಂದ ಕ್ರಿಯಾಂಗವಾದ ಇಷ್ಟಲಿಂಗಾರ್ಚನೆ, ಜ್ಞಾನಾಂಗವಾದ ಅಂತರ್ಲಿಂಗಾರ್ಚನೆಗಳೆರಡೂ ಇಲ್ಲಿ ವಿಧಿಸಲ್ಪಟ್ಟವೆ.

ವೀರಶೈವ ಪರಿಭಾಷೆಯಲ್ಲಿ ' ಸ್ಥಲ ' ಪರಬ್ರಹ್ಮ ವಾಚಕವಾಗಿದೆ. ಸಕಲ ತತ್ತ್ವಗಳಿಗೂ ಇದು ಆಶ್ರಯ ಸ್ಥಾನವಾದ್ದರಿಂದ, ಹೀಗೆ ಸ್ಥಲವೆಂದು ಹೇಳಲ್ಪಟ್ಟದೆ. ವಾಯುವಿನ ಚಲನೆಯಿಂದ ನೀರೇ ತೆರೆಯಾದಂತೆ, ' ವಿಮರ್ಶ ಶಕ್ತಿ 'ಯ ಸ್ಫುರಣದಿಂದ ಇದು ಅಂಗ–ಲಿಂಗವೆಂದು ಎರಡುತೆರನಾಯಿತು. ಇವುಗಳಲ್ಲಿ ನ್ಯೂನಾಧಿಕ ಭಾವವಿದೆ. ಅಂಗ ಅಲ್ಪಾಂಶ ; ಲಿಂಗ ಅಧಿಕಾಂಶ. ಮಾಯೋಪಾಧಿಯಿಂದ ಲಿಂಗತ್ವ ಪ್ರಾಪ್ತಿಗಾಗಿ ಈ ಮತಸಿದ್ಧಾಂತದಂತೆ, ಮತಾಚರಣೆಯನ್ನು ಆಚರಿಸಬೇಕಾಗುತ್ತದೆ. ಇವೇ ಅಂಗಸ್ಥಲ ಮತ್ತು ಲಿಂಗಸ್ಥಲವೆಂದು ೧೦೧ ಸ್ಥಲಗಳಲ್ಲಿ ಹೇಳಲ್ಪಟ್ಟವೆ. ಇವುಗಳಲ್ಲಿ ಕ್ರಮವಾಗಿ ಅಂಗಸ್ಥಲದಲ್ಲಿ ೫೭ ಮತ್ತು ಲಿಂಗಸ್ಥಲದಲ್ಲಿ ೪೪ ಹೀಗೆ ಉಪಸ್ಥಲಗಳಾಗಿರುವವು.

ಮುಕ್ತಿಸೋಪಾನಗಳೆನಿಸಿದ ಈ ಏಕೋತ್ತರ ಶತಸ್ಥಲಗಳ ಅನುಷ್ಠಾನ, ಸಮಾಜಕ್ಕೆ ಅವಶ್ಯವೆಂದು ಭಾವಿಸಿದ ಪ್ರೌಢದೇವರಾಯನ ಕಾಲದ ನೂರೊಂದು ವಿರಕ್ತರಲ್ಲಿಯ ಕೆಲವರು, ಅನುಭಾವಿಗಳಾದ ಶ್ರೀ ಬಸವಾದಿ ಪ್ರಮಥರ ವಚನಗಳನ್ನು ಆಗಮಪ್ರಮಾಣದೊಡನೆ ೧೦೧ ಸ್ಥಲಗಳ ಚೌಕಟ್ಟಿನಲ್ಲಿ ಹೊಂದಿಸಿ ಅವುಗಳಿಗೆ ವಚನ ಏಕೋತ್ತರ ಶತಸ್ಥಲವೆಂದು ಹೆಸರಿಟ್ಟು ಪ್ರಚುರಪಡಿಸಿದರು.

ಈ ದಿಶೆಯಲ್ಲಿ ಮಹಾಲಿಂಗದೇವ ಜಕ್ಕಣಾರ್ಯರ ಏಕೋತ್ತರ ಶತಸ್ಥಲಗಳು ಮತ್ತು ಕಲ್ಲುಮಠ ಪ್ರಭುದೇವರ ಲೀಲಾವಿಲಾಸವೇ ಮುಂತಾದ ಗ್ರಂಥಗಳು ತುಂಬಾ ಪ್ರಸಿದ್ಧವಾಗಿವೆ. ಅನಂತರ ಶ್ರೀ ವಿರಕ್ತ ತೋಂಟದಾರ್ಯರ ಮತ್ತು ಮಗ್ಗೆಯ ಮಾಯಿದೇವರ ಏಕೋತ್ತರ ಶತಸ್ಥಲಗಳು ಹಾಗೂ ಗುಬ್ಬಿ ಮಲ್ಲಣಾರ್ಯರ ಗಣಭಾಷಿತರತ್ನಮಾಲೆಯೇ ಮುಂತಾದ ಗ್ರಂಥಗಳೂ ಅಷ್ಟೇ ಜನ ಮನ್ನಣೆಯನ್ನು ಪಡೆದಿವೆ.

ಈ ಪವಿತ್ರ ಪ್ರಯತ್ನ ವಚನ ಸಾಹಿತ್ಯಕ್ಕಷ್ಟೇ ಸೀಮಿತವಾಗದೆ, ಪೌರಾಣಿಕ ಸಾಹಿತ್ಯವನ್ನೂ ಪ್ರವೇಶಿಸಿತು. ಇದಕ್ಕೆ ನಿದರ್ಶನವಾಗಿ ವೀರಶೈವಾಮೃತ ಪುರಾಣದಲ್ಲಿ ಕೆಂಚವೀರದೇಶಿಕರಿಗೆ ಹಲಿಗೆಯಾಚಾರ್ಯರಿಂದ ಮತ್ತು ಶ್ರೀ ಸಿದ್ಧೇಶ್ವರ ಮಹಾಪುರಾಣದಲ್ಲಿ ಶ್ರೀಬೋಳಬಸವಾರ್ಯರಿಗೆ ಶ್ರೀತೋಂಟದ ಸಿದ್ಧಲಿಂಗೇಶ್ವರರಿಂದ ಈ ಏಕೋತ್ತರ ಶತಸ್ಥಲಗಳು ಹೃದಯಂಗಮವಾಗಿ ನಿರೂಪಿಸಲ್ಪಟ್ಟವೆ.

ಈ ವರೆಗೆ ಪ್ರಕಟವಾದ ನಾಲ್ಕು ಗ್ರಂಥಗಳ ಪರಿಶೀಲನೆಯಿಂದ ಮಾನ್ಯ ಗ್ರಂಥಕರ್ತರು ತಾವು ನಿರೂಪಿಸುವ ವಿಷಯಗಳನ್ನು ವಚನ ವಾಙ್ಮಯವೇ ಮುಂತಾದ ಯಾವತ್ತೂ ಪ್ರಮಾಣಗಳೊಡನೆ ಜನಸಾಮಾನ್ಯರಿಗೂ ಅರ್ಥವಾಗುವಂತೆ ಪ್ರತಿಪಾದಿಸಿರುವುದು, ಅವರ ಸಮನ್ವಯ ದೃಷ್ಟಿಯು ದ್ಯೋತಕವಾಗಿದೆ.

ಇದೇ ರೀತಿಯಲ್ಲಿ ಮುಂಬರುವ ಗ್ರಂಥಗಳೂ ಮಾನ್ಯ ಲೇಖಕರಿಂದ ಬೇಗ ಬೆಳಕು ಕಾಣುವಂತಾಗಲಿ ಎಂದು ಈ ಮೂಲಕ ಹಾರೈಸಲಾಗಿದೆ.

ಇತಿ ಶಿವಂ.

# ಮೊದಲ್ನುಡಿ

ಸನಾತನವಾದ ವೀರಶೈವ ಧರ್ಮದ ತತ್ತ್ವಗಳು ವೇದ, ಆಗಮ ಉಪನಿಷತ್, ಪುರಾಣ ಇತಿಹಾಸಾದಿ ಗ್ರಂಥಗಳಲ್ಲಿ ನಿರೂಪಿತವಾದದ್ದು ಪಂಡಿತ ವೇದ್ಯವೇ ಸರಿ. ವೀರಶೈವ ಧರ್ಮ–ದರ್ಶನಗಳ ಸಮಗ್ರ ತತ್ತ್ವಗಳನ್ನು ಒಂದೇ ಗ್ರಂಥದಲ್ಲಿ ಅವಲೋಕಿಸಬೇಕಾದರೆ "ಸಿದ್ಧಾಂತಶಿಖಾಮಣಿ"ಯ ಹೊರತು ಬೇರೊಂದು ಗ್ರಂಥವಿಲ್ಲ. ಅಂತೆಯೇ ಇದು ವೀರಶೈವ ಧರ್ಮಗ್ರಂಥ ವೆಂದು ಪ್ರಸಿದ್ಧಿಯನ್ನು ಪಡೆದಿದೆ.

ವೇದಾಂತ ಶಾಸ್ತ್ರದ ಪ್ರಸ್ಥಾನತ್ರಯದಲ್ಲಿ ಪ್ರಸಿದ್ಧವಾಗಿರುವ ಶ್ರೀಮದ್ಭಗವದ್ಗೀತೆಯು ಸಕಲ ಉಪನಿಷತ್ತುಗಳ ಸಾರ ಸ್ವರೂಪವಾಗಿದ್ದರೆ "ಸಿದ್ಧಾಂತ ಶಿಖಾಮಣಿ"ಯು ಕಾಮಿಕಾದಿ ವಾತುಲಾಂತಗಳಾದ ಇಪ್ಪತ್ತೆಂಟು ಶಿವಾಗಮ ಗಳ ಸಾರ ಸರ್ವಸ್ವವಾಗಿದೆ. ಶ್ರೀಕೃಷ್ಣ ಪರಮಾತ್ಮನಿಂದ ಅರ್ಜುನನಿಗೆ ಉಪದೇಶಿಸಿದ ಉಪದೇಶವೇ ಶ್ರೀವ್ಯಾಸಮಹರ್ಷಿಗಳಿಂದ ಸಂಗ್ರಹಿಸಲ್ಪಟ್ಟು "ಭಗವದ್ಗೀತೆ" ಎಂಬ ಹೆಸರಿನಿಂದ ಪ್ರಸಿದ್ಧವಾಗಿರುವಂತೆ, ಶ್ರೀಜಗದ್ಗುರು ರೇಣುಕ ಭಗವತ್ಪಾದರಿಂದ ಶ್ರೀಅಗಸ್ತ್ಯಮಹರ್ಷಿಗಳಿಗೆ ಮಾಡಲ್ಪಟ್ಟ ಉಪದೇಶವೇ ಶ್ರೀಶಿವಯೋಗಿಶಿವಾಚಾರ್ಯರಿಂದ ಸಂಗ್ರಹಿಸಲ್ಪಟ್ಟು "ಸಿದ್ಧಾಂತ ಶಿಖಾಮಣಿ" ಎಂಬ ನಾಮದಿಂದ ಪ್ರಸಿದ್ಧಿಯನ್ನು ಪಡೆದಿದೆ. ಅಂತೆಯೇ ಶ್ರೀಮರಿತೋಂಟದಾರ್ಯರು —

> ರೇಣುಕಾಗಸ್ತ್ಯಸಂವಾದಂ ನಿಗಮಾಗಮವಿಶ್ರುತಮ್ ।
> ಪ್ರದೀಪಯತಿ ಗುಪ್ತಾರ್ಥಮುದ್ಧೃತ್ಯ ಶಿವಯೋಗಿರಾಟ್ ॥

ಎಂಬುದಾಗಿ ಇದೇ ಮಾತನ್ನೇ ಸಮರ್ಥಿಸಿದ್ದಾರೆ. ಈ ಗ್ರಂಥವನ್ನು "ರೇಣುಕ ಗೀತಾ" ಎಂತಲೂ ಕರೆಯುವದುಂಟು ; ಆದರೆ ಸಿದ್ಧಾಂತಶಿಖಾಮಣಿ ಎಂಬುದೇ ಇದರ ಪ್ರಸಿದ್ಧವಾದ ನಾಮವಾಗಿದೆ.

**ಗ್ರಂಥನಾಮ ರಹಸ್ಯ :—**

ಶ್ರೀರೇಣುಕಾಗಸ್ತ್ಯಸಂವಾದಾತ್ಮಕವಾದ ಈ ಗ್ರಂಥಕ್ಕೆ ಶ್ರೀಶಿವಯೋಗಿ ಶಿವಾಚಾರ್ಯರು "ಸಿದ್ಧಾಂತಶಿಖಾಮಣಿ" ಎಂದು ನಾಮಕರಣಮಾಡಿದ ರಹಸ್ಯವೇನೆಂದರೆ—

" ಸಿದ್ಧಾಂತಶಬ್ದಃ ಪಂಕಜಾದಿಶಬ್ದವದ್ಯೋಗರೂಢ್ಯಾ ಶಿವ-ಪ್ರಣೀತೇಷು ಕಾಮಿಕಾದಿಷು ದಶಾಷ್ಟಾದಶತಂತ್ರೇಷು ಪ್ರಸಿದ್ಧಃ"

(ರತ್ನತ್ರಯ ಪುಟ-೫)

ಎನ್ನುವ ಅಘೋರಶಿವಾಚಾರ್ಯರ ವಚನದಂತೆ, ಶಿವನಿಂದ ಉಪದೇಶಿಸಲ್ಪಟ್ಟ ಕಾಮಿಕಾದಿ ವಾತುಲಾಂತಗಳಾದ ಇಪ್ಪತ್ತೆಂಟು ಶಿವಾಗಮಗಳನ್ನು " ಸಿದ್ಧಾಂತ" ವೆಂದು ಕರೆಯುತ್ತಾರೆ. ಈ ಆಗಮಗಳ ಉತ್ತರಭಾಗದಲ್ಲಿ ಅಂದರೆ ಕೊನೆಯಲ್ಲಿ ವೀರಶೈವಮತವು ನಿರೂಪಿತವಾಗಿದೆ. ಹೀಗೆ ಆಗಮಗಳ ಕೊನೆಯಲ್ಲಿರುವ ಸಿದ್ಧಾಂತವೇ ಈ ಗ್ರಂಥದಲ್ಲಿ ಪ್ರತಿಪಾದಿತವಾಗಿರುವದರಿಂದ ಈ ಗ್ರಂಥವನ್ನು " ಸಿದ್ಧಾಂತಶಿಖಾಮಣಿ '' ಎಂಬ ಅನ್ವರ್ಥಕ ನಾಮದಿಂದ ವ್ಯವಹರಿಸಿದ್ದಾರೆ. ಇದೇ ಅಭಿಪ್ರಾಯವನ್ನೇ ಶ್ರೀ ಶಿವಯೋಗಿ ಶಿವಾಚಾರ್ಯರು—

ಸರ್ವೇಷಾಂ ಶೈವತಂತ್ರಾಣಾಮುತ್ತರತ್ವಾನ್ನಿರುತ್ತರಮ್ ।
ನಾಮ್ನಾ ಪ್ರತೀಯತೇ ಲೋಕೇ ಯತ್ಸಿದ್ಧಾಂತಶಿಖಾಮಣಿಃ ॥

(ಸಿ. ಶಿ. ೧-೩೧)

ಎಂಬುದಾಗಿ ಸಮರ್ಥಿಸಿದ್ದಾರೆ.

ಇದೂ ಅಲ್ಲದೇ—

ಸಾಂಖ್ಯಂ ಯೋಗಃ ಪಾಂಚರಾತ್ರಂ ವೇದಾಃ ಪಾಶುಪತಂ ತಥಾ ॥
ಏತಾನಿ ಮಾನಭೂತಾನಿ ನ ಹಂತವ್ಯಾನಿ ಯುಕ್ತಿಭಿಃ ॥

(ಸಿ. ಶಿ. ೫-೪)

ಸಾಂಖ್ಯ, ಯೋಗ, ಪಾಂಚರಾತ್ರ, ಪಾಶುಪತ ಮುಂತಾದ ಎಲ್ಲ ಮತಗಳೂ ವೇದಾಗಮಗಳನ್ನೇ ಆಧಾರವಾಗಿ ಇಟ್ಟುಕೊಂಡು ಪ್ರತಿಪಾದಿಸಲ್ಪಟ್ಟಿರುವದರಿಂದ, ಯುಕ್ತಿ-ಪ್ರಯುಕ್ತಿಗಳಿಂದ ಯಾವ ದರ್ಶನವನ್ನೂ ಖಂಡಿಸಬಾರದೆಂಬ ಉದಾತ್ತ ಮನೋಭಾವನೆಯನ್ನು ಹೊಂದಿ, ದ್ವೈತ-ಅದ್ವೈತಾದಿ ಮತಗಳ ಸಮನ್ವಯಾತ್ಮಕವಾದ ಸಿದ್ಧಾಂತವು ಈ ಗ್ರಂಥದಲ್ಲಿ ಉಪದೇಶಿಸಲ್ಪಟ್ಟಿರುವದರಿಂದ, ಸರ್ವಗ್ರಾಹ್ಯವಾದ ಈ ಸಿದ್ಧಾಂತವು " ಸಕಲ ಸಿದ್ಧಾಂತಗಳ ಶಿಖಾಮಣಿ '' ಎಂದರೆ ಅತಿಶಯೋಕ್ತಿಯಾಗಲಾರದು.

## ಗ್ರಂಥಕರ್ತರ ಕಾಲಮಾನ ವಿಚಾರ :—

ಶ್ರೀ ಶಿವಯೋಗಿಶಿವಾಚಾರ್ಯರ ವಂಶವರ್ಣನೆಯಲ್ಲಿ ಬರುವ "ಮುದ್ದದೇವ" ಮತ್ತು "ಸಿದ್ಧನಾಥ" ಎಂಬ ಹೆಸರುಗಳು ಬಹುಜನ ವಿದ್ವಾಂಸರನ್ನು ಭ್ರಮೆಗೀಡುಮಾಡಿವೆ. ಕ್ರಿ.ಶ. ೧೭೦೮ ರಲ್ಲಿ ಆಗಿಹೋದ ಸಂಸ್ಕೃತ ಘನವಿದ್ವಾಂಸರಾದ ಶ್ರೀ ಮರಿತೋಂಟದಾರ್ಯರು ಈ ಸಿದ್ಧಾಂತಶಿಖಾಮಣಿಗೆ "ತತ್ತ್ವಪ್ರದೀಪಿಕಾ" ಎಂಬ ಹೆಸರಿನ ಸಂಸ್ಕೃತ ವ್ಯಾಖ್ಯಾನವನ್ನು ಬರೆದಿದ್ದಾರೆ. ತಾಡಓಲೆಯಲ್ಲಿ ಇದ್ದ ಈ ಗ್ರಂಥವನ್ನು ಸೊಲ್ಲಾಪುರದ ಶ್ರೀ ವಾರದ ಮಲ್ಲಪ್ಪನವರು ೧೯೦೫ ನೇ ಇಸ್ವಿಯಲ್ಲಿ ವೀರಶೈವ ಲಿಂಗಿ ಬ್ರಾಹ್ಮಣ ಗ್ರಂಥಮಾಲೆಯ ೧೬ ನೇ ಕುಸುಮವಾಗಿ ದೇವನಾಗರಿ ಲಿಪಿಯಲ್ಲಿ ಪ್ರಥಮವಾಗಿ ಮುದ್ರಿಸಿ, ವೀರಶೈವ ಸಮಾಜಕ್ಕೆ ಮಹದುಪಕಾರ ಮಾಡಿದ್ದಾರೆ. ಈ ಗ್ರಂಥದ ಆರಂಭದ ೧ ಹಾಗೂ ೨ನೇ ಪುಟದಲ್ಲಿ ಶ್ರೀಮರಿತೋಂಟದಾರ್ಯರು—"ಅತ್ರ ಕಲಿಕಾಲಪ್ರವೇಶಾನಂತರಂ ಲೋಕಹಿತಾರ್ಥಂ ರೇಣುಕಗಣೇಶ್ವರ ಇತಿ ಪ್ರಸಿದ್ಧಃ ರೇವಣಸಿದ್ಧೇಶ್ವರಃ ಕುಂಭಸಂಭವಾಯ ವೀರಶೈವಶಾಸ್ತ್ರಮುಪದಿಷ್ಟವಾನ್ । ತದನಂತರಂ ರೇವಣಸಿದ್ಧೇಶ್ವರ ದೃಷ್ಟಿಗರ್ಭಸಂಭೂತ ಸಿದ್ಧರಾಮೇಶ್ವರಸಂಪ್ರದಾಯಪ್ರಸಿದ್ಧಃ ಸಕಲ ನಿಗಮಾಗಮಪಾರಗಃ ಶಿವಯೋಗೀಶ್ವರ ಇತ್ಯಭಿಧಾನವಾನ್ ಕಶ್ಚಿನ್ಮಾಹೇಶ್ವರಃ ತದ್ರೇಣುಕಾಗಸ್ತ್ಯ ಸಂವಾದಂ ನಿರ್ವಿಘ್ನೇನ ಸ್ವಶಿಷ್ಯಾನ್ ಬೋಧಯಿತುಂ ಸ್ವಮನಸಿ ಕೃತಸಕಲ ಸಿದ್ಧಾಂತ ಶ್ರೇಷ್ಠ ನಿಗಮಾಗಮೈಕ್ಯಗರ್ಭೀಕಾರಲಕ್ಷಣಸ್ವೇಷ್ಟದೇವತಾ ನಮಸ್ಕಾರರೂಪಮಂಗಲಂ ಶಿಷ್ಯಶಿಕ್ಷಾರ್ಥಂ ಸಪ್ತಭಿಃ ಶ್ಲೋಕೈರ್ನಿಬಧ್ನಾತಿ ।" ಎಂಬ ಅವತರಣಿಕೆಯಲ್ಲಿ, ಗ್ರಂಥಕಾರನಾದ ಶ್ರೀ ಶಿವಯೋಗಿ ಶಿವಾಚಾರ್ಯನು ಶ್ರೀ ಜ. ರೇವಣಸಿದ್ಧೇಶ್ವರರ ವರಪ್ರಸಾದದಿಂದ ಜನಿಸಿದ ಸೊನ್ನಲಿಗೆಯ ಶ್ರೀ ಸಿದ್ಧರಾಮೇಶ್ವರನ ವಂಶಜನೆಂಬುದಾಗಿ ಬರೆದಿದ್ದಾರೆ. ಆದರೆ ಈ ಮಾತು ಅಷ್ಟೊಂದು ಸಂಗತವಾಗಿ ತೋರುವದಿಲ್ಲ.

ಇಲ್ಲಿ ಬಹು ಸೂಕ್ಷ್ಮವಾಗಿ ಲಕ್ಷಿಸಬೇಕಾದ ವಿಷಯವಿದೆ. ಅದೇನೆಂದರೆ : ಸೊಲ್ಲಾಪುರದಲ್ಲಿ ಸುಮಾರು ೧೧ ನೇ ಶತಮಾನದಲ್ಲಿ "ಮುದ್ದಗೌಡ ಮತ್ತು ಸುಗ್ಗಲಾದೇವಿ" ಎಂಬ ಹಿರೇಮಠದ ದಂಪತಿಗಳಿದ್ದರು. ಶ್ರೀಸುಗ್ಗಲಾದೇವಿಯು ಅರವತ್ತು ವರ್ಷದ ವಯೋವೃದ್ಧೆ ಇದ್ದಾಗ, ಒಮ್ಮೆ ಶ್ರೀಜಗದ್ಗುರು

ರೇವಣಸಿದ್ಧೇಶ್ವರರು ಸೊನ್ನಲಿಗೆಗೆ ಆಗಮಿಸಿ, ಸುಗ್ಗಲಾದೇವಿಗೆ ದಿವ್ಯಪುತ್ರನ ಜನನವಾಗುವಂತೆ ಆಶೀರ್ವದಿಸಿ ಹೋದರು. ದಿವ್ಯಯೋಗಿಯ ಆಶೀರ್ವಾದದಿಂದ ಜನಿಸಿದ ಆ ಮಗುವೇ ಮುಂದೆ "ಸಿದ್ಧರಾಮಶಿವಯೋಗಿ" ಎಂಬ ಹೆಸರಿನಿಂದ ಪ್ರಸಿದ್ಧನಾದನು.

ಹದಿನೇಳನೇ ಶತಮಾನದ ಶ್ರೀ ಮರಿತೋಂಟದಾರ್ಯರು ಈ ಸಿದ್ಧಾಂತ ಶಿಖಾಮಣಿಗೆ ಸಂಸ್ಕೃತ ವ್ಯಾಖ್ಯಾನವನ್ನು ಬರೆಯುವಾಗ ಕವಿಯ ವಂಶಾನುಕ್ರಮದಲ್ಲಿ ಬರುವ 'ಮುದ್ದದೇವ' ಎಂಬ ಹೆಸರನ್ನೂ, ಆ ಮುದ್ದದೇವನ ಮಗನು ಸಿದ್ಧನಾಥ'ನೆಂಬುದನ್ನೂ ನೋಡಿ, ಮುದ್ದದೇವನೆಂದರೆ ಮುದ್ದಗೌಡನೆಂತಲೂ, ಸಿದ್ಧನಾಥನೆಂದರೆ ಶ್ರೀಸಿದ್ದರಾಮೇಶ್ವರ ಎಂತಲೂ ತಿಳಿದುಕೊಂಡು, ಆ ಸಿದ್ಧನಾಥನ ಮಗನು ಶಿವಯೋಗಿಶಿವಾಚಾರ್ಯನಾದ್ದರಿಂದ ಅವನಿಗೆ ಸೊನ್ನಲಿಗೆಯ ಶ್ರೀ ಸಿದ್ರರಾಮೇಶ್ವರನ ಮಗನೇ ಎಂದು ಭ್ರಮಿಸಿ ಈ ರೀತಿ ಬರೆದಿದ್ದಾರೆ. ಇವರ ವಿಚಾರದಿಂದ ನೋಡಿದರೆ—ಸಿದ್ಧಾಂತಶಿಖಾಮಣಿಯ ಕಾಲವು ಹನ್ನೊಂದು ಇಲ್ಲವೇ ಹನ್ನೆರಡನೇ ಶತಮಾನಕ್ಕೆ ಬರುತ್ತದೆ. ಆದರೆ ಶ್ರೀ ಮರಿತೋಂಟದಾರ್ಯರ ಈ ಪಕ್ಷವು ಅನೇಕ ಕಾರಣಗಳಿಂದ ಸರಿಯಾದುದಲ್ಲವೆಂಬ ವಿಷಯವನ್ನು ಅನೇಕ ವೀರಶೈವ ವಿದ್ವಾಂಸರು ಪ್ರತಿಪಾದಿಸಿದ್ದಾರೆ. ಅದನ್ನೇ ಇಲ್ಲಿ ಪರ್ಯಾಲೋಚಿಸೋಣ.

ಡಾ. ಜ. ಚ. ನಿ. ಯವರು 'ಮಣಿಕಾಂತಿ' ಎಂಬ ಗ್ರಂಥದ ಪೀಠಿಕಾ ಭಾಗ (ಪುಟ ೧೬ ರಿಂದ ೨೦)ದಲ್ಲಿ ಈರೀತಿಯಾಗಿ ನಿರೂಪಿಸಿದ್ದಾರೆ— ಮುದ್ದದೇವನ ಮಗನಾದ ಸಿದ್ಧನಾಥನೇ ಸಿದ್ಧರಾಮೇಶ್ವರನು, ಆ ಸಿದ್ಧರಾಮೇಶ್ವರನ ಮಗನೇ ಶಿವಯೋಗಿಶಿವಾಚಾರ್ಯನು—ಎಂಬ ಮಾತು ಸರಿಯಾದುದಲ್ಲ. ಏಕೆಂದರೆ, ಸೊಲ್ಲಾಪುರದ ಸಿದ್ಧರಾಮೇಶ್ವರನು ಅವಿವಾಹಿತನು. ಆದ್ದರಿಂದ ಅವನಿಗೆ ಸಂತಾನವಾದ ಬಗೆ ಹೇಗೆ? ಇದೂ ಅಲ್ಲದೇ, ಈ ಸಿದ್ಧರಾಮೇಶ್ವರರ ಚರಿತ್ರ ಪ್ರತಿಪಾದಕವಾದ ಯಾವುದೇ ಪುರಾಣಾದಿಗಳಲ್ಲಿ ಶ್ರೀ ಸಿದ್ಧರಾಮೇಶ್ವರನಿಗೆ ಮಗನಿದ್ದನೆಂಬ ವಿಷಯವು ಬಂದಿರುವದಿಲ್ಲ. ಇನ್ನು ಶ್ರೀ ಶಿವಯೋಗಿ ಶಿವಾಚಾರ್ಯರ ತಂದೆಯು ಶ್ರೀ ಸಿದ್ದರಾಮೇಶ್ವರನೇ ಆಗಿದ್ದರೆ ಗ್ರಂಥಕಾರನು ತನ್ನ ತಂದೆಯ ಹೆಸರನ್ನು ಸಿದ್ಧರಾಮೇಶ್ವರನೆಂದೇ ಬರೆಯುತ್ತಿದ್ದನೇ ವಿನಹ,

‘ ಸಿದ್ಧನಾಥ ’ ನೆಂದು ಬರೆಯುತ್ತಿರಲಿಲ್ಲ. ಹೆಸರನ್ನು ಕೆಡಿಸಿ ಬರೆಯಲು ಛಂದಸ್ಸಿನ ಭಂಗವಾಗುವ ಭಯವೂ ಇಲ್ಲ—“ತಸ್ಯಾಸೀನ್ನಂದನಃ ಶಾಂತಃ ಸಿದ್ಧನಾಥಾಭಿಧಃ ಶುಚಿಃ” ಹೀಗೆ ಬರೆಯುವುದಕ್ಕೆ ಬದಲಾಗಿ “ತಸ್ಯಾಸೀನ್ನಂದನಃ ಶಾಂತಃ ಸಿದ್ಧರಾಮಾಭಿಧಃ ಶುಚಿಃ” ಎಂಬುದಾಗಿ ಬರೆಯಬಹುದಾಗಿತ್ತು.

ಇನ್ನೂ ಮತ್ತೊಂದು ವಿಷಯವೇನೆಂದರೆ, ಸೊಲ್ಲಾಪುರದ ಸಿದ್ಧರಾಮೇಶ್ವರನ ತಂದೆಯ ಹೆಸರು ‘ ಮುದ್ದಗೌಡ ’ ಎಂದು ಇತ್ತೇ ವಿನಹ ‘ಮುದ್ದದೇವ’ ನೆಂದಲ್ಲ. ಆದ್ದರಿಂದ ಸ್ವಲ್ಪ ಹೆಸರಿನ ಅಕ್ಷರಗಳಲ್ಲಿ ಸಮಾನತೆ ಕಂಡೊಡನೆ ಹಾಗೆ ಹೇಳುವದು ಅಷ್ಟೊಂದು ಸಮಂಜಸವಾಗಿ ತೋರಲಾರದು.

ಹಾಗೆಯೇ ಗ್ರಂಥಕಾರನ ವಂಶದ ಮೂಲಪುರುಷನಾದ ಶಿವಯೋಗಿಯೇ ಸೊನ್ನಲಿಗೆಯ ಶ್ರೀ ಸಿದ್ಧರಾಮೇಶ್ವರನು ; ಅವನೇ ಗ್ರಂಥಕಾರನಾದ ಶ್ರೀ ಶಿವಯೋಗಿಶಿವಾಚಾರ್ಯರ ಮುತ್ತಜ್ಜನು—ಎಂದು ಊಹಿಸುವದೂ ಸರಿಯಲ್ಲ. ಏಕೆಂದರೆ, ಶಿವಯೋಗಿಶಿವಾಚಾರ್ಯನು ತನ್ನ ಗ್ರಂಥಾರಂಭದಲ್ಲಿ—

ಆಲೋಕ್ಯ ಶೈವತಂತ್ರಾಣಿ ಕಾಮಿಕಾದ್ಯಾನಿ ಸಾದರಮ್ ।
ವಾತುಲಾಂತಾನಿ ಶೈವಾನಿ ಪುರಾಣಾನ್ಯಖಿಲಾನಿ ತು ॥

ಎಂಬ ಶ್ಲೋಕದಲ್ಲಿ, ಸಿದ್ಧಾಂತಶಿಖಾಮಣಿಯನ್ನು ಬರೆಯಬೇಕಾದರೆ ಕಾಮಿಕಾದಿ ವಾತುಲಾಂತಗಳಾದ ಇಪ್ಪತ್ತೆಂಟು ಆಗಮಗಳನ್ನೂ, ಎಲ್ಲ ಪುರಾಣಗಳನ್ನೂ ನೋಡಿದ್ದೇನೆ—ಎಂದು ಬರೆದಿರುವಂತೆಯೇ, ತನ್ನ ಮುತ್ತಜ್ಜನ ವಚನಶಾಸ್ತ್ರವನ್ನೂ ತಾನು ನೋಡಿದ್ದೇನೆಂದು ಬರೆಯುತ್ತಿದ್ದನು. ಆದರೆ ಹಾಗೆ ಹೇಳದಿರುವದರಿಂದ, ಈ ಗ್ರಂಥಕಾರನ ಮುತ್ತಜ್ಜನಾದ ಶಿವಯೋಗಿಯು ಸೊನ್ನಲಿಗೆಯ ಸಿದ್ಧರಾಮೇಶ್ವರನಲ್ಲವೆಂಬ ವಿಷಯವು ಸ್ಪಷ್ಟವಾಗುತ್ತದೆ. ಇದೂ ಅಲ್ಲದೇ ಯಾವದೇ ಶರಣರ ವಚನಸಾಹಿತ್ಯದ ಬಗ್ಗೆ ಒಂದು ಮಾತನ್ನಾದರೂ ಹೇಳದಿರುವದರಿಂದ, ಶ್ರೀ ಶಿವಯೋಗಿಶಿವಾಚಾರ್ಯರು ಹನ್ನೊಂದು ಹಾಗೂ ಹನ್ನೆರಡನೇ ಶತಮಾನದ ಶ್ರೀ ಸಿದ್ಧರಾಮೇಶ್ವರ, ಬಸವೇಶ್ವರ ಮುಂತಾದ ಶರಣರಿಗಿಂತಲೂ ಪ್ರಾಚೀನರಾದವರು. ಈ ಎಲ್ಲ ದೃಷ್ಟಿಯಿಂದ ನೋಡಿದರೆ ಶ್ರೀ ಶಿವಯೋಗಿಶಿವಾಚಾರ್ಯನು ಸೊನ್ನಲಿಗೆಯ ಶ್ರೀ ಸಿದ್ಧರಾಮೇಶ್ವರನ

ವಂಶದವನೆಂಬ ಶ್ರೀ ಮರಿತೋಂಟದಾರ್ಯರ ಮಾತು ತರ್ಕಶೂನ್ಯವಾಗಿ ತೋರುತ್ತದೆ.

ಆಸ್ಥಾನ ವಿದ್ವಾನ್ ಶ್ರೀ ವೇ|| ಪಂ|| ಎನ್. ಆರ್. ಕರಿಬಸವಶಾಸ್ತ್ರಿಗಳು, ಸಿದ್ಧಾಂತಶಿಖಾಮಣಿ ವ್ಯಾಖ್ಯಾನಪರವಾದ ಗ್ರಂಥದ (ಪುಟ-೫) ತಮ್ಮ ಪ್ರಸ್ತಾವನೆಯಲ್ಲಿ— " ಈ ಗ್ರಂಥಕರ್ತರಾದ ಶಿವಯೋಗಿಶಿವಾಚಾರ್ಯರು ಪೀಠಿಕಾಭಾಗದಲ್ಲಿ ತಮ್ಮ ವಂಶಾನುಕ್ರಮವನ್ನು ಹೇಳಿಕೊಂಡಿದ್ದರೂ, ಅದರಿಂದ ಇವರು ಯಾವ ಕಾಲದವರು, ಯಾವ ಧರ್ಮದವರು, ಯಾವ ಸ್ಥಲದವರು ಎಂಬ ವಿಷಯವು ಸ್ಪಷ್ಟವಾಗುವದಿಲ್ಲ. ಸೊಲ್ಲಾಪುರದ ಸಿದ್ಧರಾಮಶಿವಯೋಗಿಗಳವರ ಸಂತತಿಯವರೆಂದು ಹೇಳುವದಕ್ಕೆ ಸಮಂಜಸವಾದ ಆಧಾರವಿಲ್ಲ, ಮತ್ತು ಈ ಗ್ರಂಥವು ಬಸವಾದಿ ಪ್ರಮಥರ ಅವತಾರಕ್ಕಿಂತಲೂ ಹಿಂದಣದಾಗಿರಬೇಕು " ಎಂದು ಹೇಳಿ ಪೂರ್ವದಲ್ಲಿ ಹೇಳಿದ ಶ್ರೀ ಮರಿತೋಂಟದಾರ್ಯರ ಉಕ್ತಿಯ ಅನೌಚಿತ್ಯವನ್ನು ಸೂಚಿಸಿ, ತಮ್ಮ ಸೂಕ್ತವಾದ ಅಭಿಪ್ರಾಯವನ್ನು ಪ್ರಕಟಿಸಿದ್ದಾರೆ.

**ಸಿದ್ಧಾಂತಶಿಖಾಮಣಿ ಕಾಲನಿರ್ಣಯದಲ್ಲಿ ದಾಸಗುಪ್ತರು ಮಾಡಿರುವ ಪ್ರಮಾದ :—**

ಭಾರತದ ದಾರ್ಶನಿಕ ಇತಿಹಾಸಜ್ಞರಲ್ಲಿ ಶ್ರೀ ಎಸ್. ಎನ್. ದಾಸಗುಪ್ತರೂ ಒಬ್ಬರು. ಇವರು 'A History of Indian Philosophy' ಎಂಬ ಐದುಭಾಗದ ಭಾರತೀಯ ದರ್ಶನ ಇತಿಹಾಸವನ್ನು ಬರೆದಿದ್ದಾರೆ. ಅವುಗಳಲ್ಲಿ 'Southorn Schools of Saivism' ಎನ್ನುವ ಐದನೇ ಭಾಗದಲ್ಲಿ ವೀರಶೈವದರ್ಶನದ ಇತಿಹಾಸ ಹಾಗೂ ಸಾಹಿತ್ಯದ ಬಗ್ಗೆ ನಿರೂಪಿಸಿದ್ದಾರೆ. ಇಲ್ಲಿ ವೀರಶೈವ ಧರ್ಮಗ್ರಂಥದ ಸಿದ್ಧಾಂತಶಿಖಾಮಣಿಯ ಕಾಲದಬಗ್ಗೆ ನಿರ್ಣಯಮಾಡುವಾಗ :— "Siddhanta Shikhamani refers to Basava and is itself reffered to by Sripati. This shows that the book must have been written between the dates of Basava and Sripati" (P. 44). ಅಂದರೆ ಸಿದ್ಧಾಂತಶಿಖಾಮಣಿಯಲ್ಲಿ ಶ್ರೀಬಸವೇಶ್ವರನ ಉಲ್ಲೇಖವಿದೆ ; ಶ್ರೀಪ

ಪಂಡಿತಾರಾಧ್ಯರು ತನ್ನ ಶ್ರೀಕರಭಾಷ್ಯದಲ್ಲಿ ಸಿದ್ಧಾಂತಶಿಖಾಮಣಿಯನ್ನು ಪ್ರಮಾಣರೂಪವಾಗಿ ಉದಾಹರಿಸಿದ್ದಾರೆ; ಆದ್ದರಿಂದ ಈ ಗ್ರಂಥವು ಶ್ರೀ ಬಸವೇಶ್ವರರ ನಂತರ ಮತ್ತು ಶ್ರೀಪತಿಪಂಡಿತಾರಾಧ್ಯರ ಮೊದಲು ನಿರ್ಮಾಣವಾಗಿರಬೇಕು – ಎಂಬ ಅಭಿಪ್ರಾಯವನ್ನು ವ್ಯಕ್ತಮಾಡಿದ್ದಾರೆ. ಇಲ್ಲಿ ಸಿದ್ಧಾಂತಶಿಖಾಮಣಿಯು ಶ್ರೀಪತಿಪಂಡಿತಾರಾಧ್ಯರಿಗಿಂತಲೂ ಮೊದಲಿನದೆಂಬ ದಾಸಗುಪ್ತರ ಮಾತು ವಾಸ್ತವವಾಗಿದ್ದರೂ, ಸಿದ್ಧಾಂತಶಿಖಾಮಣಿಯಲ್ಲಿ ಬಸವೇಶ್ವರರ ಉಲ್ಲೇಖವಿದೆ, ಆದ್ದರಿಂದ ಇದು ಬಸವೇಶ್ವರರ ನಂತರದ ಗ್ರಂಥವೆಂಬ ಇವರ ತರ್ಕವು ಪ್ರಮಾದ (ದೋಷ) ಪೂರ್ಣವಾಗಿದೆ.

ಶ್ರೀ ದಾಸಗುಪ್ತರು—"Even then the Siddhantha-Sikhamani refers to the view of Basava that those, who decried Siva, should be killed." (A History of Indian philosophy, Vol. V. P. 45.) ಅಂದರೆ ಶಿವನಿಂದೆಯನ್ನು ಮಾಡುವವನನ್ನು ಆವಶ್ಯವಾಗಿ ಕೊಲ್ಲಬೇಕು—ಎನ್ನುವ ಬಸವೇಶ್ವರಾಚಾರವು ಸಿದ್ಧಾಂತಶಿಖಾಮಣಿಯಲ್ಲಿ ಉಲ್ಲಿಖಿತವಾಗಿದೆ—ಎಂದು ಹೇಳಿ ಅದಕ್ಕೆ ಪ್ರಮಾಣರೂಪವಾಗಿ ಸಿದ್ಧಾಂತಶಿಖಾಮಣಿಯ—

"ಅಥ ವೀರಭದ್ರಾಚಾರ-ಬಸವೇಶ್ವರಾಚಾರಂ ಸೂಚಯನ್ ಭಕ್ತಾಚಾರಭೇದಂ ಪ್ರತಿಪಾದಯತಿ—

ಶಿವನಿಂದಾಕರಂ ದೃಷ್ಟ್ವಾ ಘಾತಯೇದಥವಾ ಶಪೇತ್ ।
ಸ್ಥಾನಂ ವಾ ತತ್ಪರಿತ್ಯಜ್ಯ ಗಚ್ಛೇದ್ಯದ್ಯಕ್ಷಮೋ ಭವೇತ್ ॥"

(ಸಿ. ಶಿ. ೯–೩೮)

ಈ ಅಂಶವನ್ನು ಉದಾಹರಿಸಿದ್ದಾರೆ. ಮೇಲೆ ಹೇಳಲ್ಪಟ್ಟ ಉಲ್ಲೇಖದಲ್ಲಿ ಬಸವೇಶ್ವರರ ಹೆಸರು ಮೂಲ ಗ್ರಂಥದಲ್ಲಿ ಇರುವದಿಲ್ಲ. ಆದರೆ ಈ ಗ್ರಂಥಕ್ಕೆ ಸಂಸ್ಕೃತವ್ಯಾಖ್ಯಾನವನ್ನು ಬರೆದ ಶ್ರೀಮರಿತೋಂಟದಾರ್ಯರ ಅವತರಣಿಕೆಯಲ್ಲಿದೆ.

ಮೇಲೆ ಹೇಳಿದ ಸಿದ್ಧಾಂತಶಿಖಾಮಣಿಯ ಒಂಭತ್ತನೇ ಪರಿಚ್ಛೇದದ ಮೂವತ್ತೆಂಟನೇ ಶ್ಲೋಕದಲ್ಲಿ ವೀರಶೈವರ 'ಪಂಚಾಚಾರ'ಗಳಲ್ಲೊಂದಾದ

'ಗಣಾಚಾರ'ದ ಸ್ವರೂಪವು ವರ್ಣಿಸಲ್ಪಟ್ಟಿದೆ. ಅಂದರೆ ಶಿವಭಕ್ತನಾದವನು ಯಾರ ಮುಖದಿಂದಲೂ ಎಂದೂ ಶಿವನಿಂದೆಯನ್ನು ಕೇಳಬಾರದು. ಒಂದು ವೇಳೆ ಯಾರಾದರೂ ತನ್ನ ಮುಂದೆ ಶಿವನಿಂದೆಯನ್ನು ಮಾಡಿದರೆ, ಅವರನ್ನು ಸಂಹರಿಸಬೇಕು, ಸಂಹರಿಸಲಸಮರ್ಥನಾಗಿದ್ದರೆ, ಆ ಸ್ಥಾನವನ್ನು ಬಿಟ್ಟು ತಾನೇ ತೊಲಗಬೇಕು—ಎಂಬುದು ಗಣಾಚಾರವು. ಈ ಅರ್ಥಪರವಾದ ಈ ಶ್ಲೋಕದ ವ್ಯಾಖ್ಯಾನವನ್ನು ಬರೆಯುವಾಗ ಶ್ರೀ ಮರಿತೋಂಟದಾರ್ಯರು, ಜನರಿಗೆ ವಿಷಯವು ಸ್ಪಷ್ಟವಾಗಿ ತಿಳಿಯಲೆಂಬ ಉದ್ದೇಶದಿಂದ ಶ್ರೀ ವೀರಭದ್ರ ಹಾಗೂ ಬಸವೇಶ್ವರರ ಹೆಸರುಗಳನ್ನು ಅವತರಣಿಕೆಯಲ್ಲಿ ತೆಗೆದುಕೊಂಡಿದ್ದಾರೆ.

ತಾತ್ಪರ್ಯವೇನೆಂದರೆ, ದಕ್ಷಬ್ರಹ್ಮನು ಶಿವನಿಗೆ ಅಪಮಾನಕರವಾದ ಯಜ್ಞವನ್ನು ಮಾಡುತ್ತಿರುವಾಗ ಶಿವಗಣನಾದ ಶ್ರೀ ವೀರಭದ್ರನು ಆ ಯಜ್ಞ ಮಂಟಪಕ್ಕೆಹೋಗಿ ಯಜ್ಞವೆಲ್ಲವನ್ನೂ ವಿಧ್ವಂಸಗೊಳಿಸಿ, ದಕ್ಷಬ್ರಹ್ಮನ ಶಿರವನ್ನು ಹರಿದು ಅವನಿಗೆ ಕುರಿತಲೆಯನ್ನಿಟ್ಟನು. ಇನ್ನು ಬಿಜ್ಜಲನ ರಾಜಧಾನಿಯಾದ ಕಲ್ಯಾಣದಲ್ಲಿ ಶರಣರ ಕ್ರಾಂತಿಯಾದಾಗ ರಾಜಭಟರು ಶಿವಭಕ್ತರನ್ನು ಕಂಡಲ್ಲಿ ಸಂಹರಿಸತೊಡಗಿದಾಗ ಅದನ್ನು ತಡೆಯುವದಾಗದ ಶ್ರೀಬಸವೇಶ್ವರರು ಆ ಸ್ಥಾನವನ್ನು ತ್ಯಜಿಸಿ ತನ್ನ ದೀಕ್ಷಾಗುರುಗಳಾದ ಶ್ರೀ ಜಾತವೇದಮುನಿಗಳ ಸ್ಥಾನವಾದ ಕೂಡಲಸಂಗಮಕ್ಷೇತ್ರಕ್ಕೆ ಬಂದು ಅಲ್ಲಿಯೇ ಐಕ್ಯರಾದರು—ಎಂಬ ಇತಿಹಾಸವಿದೆ.

ಇಲ್ಲಿ, ಶ್ರೀಮರಿತೋಂಟದಾರ್ಯರ ಅಭಿಪ್ರಾಯದಂತೆ, ಶ್ರೀ ವೀರಭದ್ರನಂತೆ ಶಿವನಿಂದಕನನ್ನು ಸಂಹರಿಸುವದೇ 'ವೀರಭದ್ರಾಚಾರ'ವು; ಅದರಂತೆ ನಿಂದೆಯನ್ನು ತಡೆಯಲಸಮರ್ಥನಾಗಿ ಶ್ರೀ ಬಸವೇಶ್ವರರಂತೆ ಆ ಸ್ಥಾನವನ್ನು ತ್ಯಜಿಸುವದೇ 'ಬಸವೇಶ್ವರಾಚಾರ'ವು.

ಹೀಗೆ "ಶಿವನಿಂದಾಕರಂ ದೃಷ್ಟ್ವಾ ಘಾತಯೇತ್" ಎಂಬುದಕ್ಕೆ ವೀರಭದ್ರಾಚಾರವೆಂತಲೂ, "ಸ್ಥಾನಂ ವಾ ಪರಿತ್ಯಜ್ಯ ಗಚ್ಛೇತ್" ಎನ್ನುವದಕ್ಕೆ ಶ್ರೀ ಬಸವೇಶ್ವರಾಚಾರವೆಂತಲೂ ಶ್ಲೋಕದ ಈ ಅಭಿಪ್ರಾಯವು, ಸ್ಪಷ್ಟವಾಗಿ ತಿಳಿಯಲೆಂಬ ಉದ್ದೇಶದಿಂದ, ಶ್ರೀಮರಿತೋಂಟದಾರ್ಯರು ತಮ್ಮ ವ್ಯಾಖ್ಯಾನ ಪೂರ್ವದ ಅವತರಣಿಕೆಯಲ್ಲಿ ವೀರಭದ್ರ ಹಾಗೂ ಬಸವೇಶ್ವರರ ಹೆಸರುಗಳನ್ನು

ಉದಾಹರಿಸಿದ್ದಾರೆ. ಆದರೆ ಪದ್ಯರೂಪವಾದ ಸಿದ್ಧಾಂತಶಿಖಾಮಣಿಯ ಯಾವ ಶ್ಲೋಕದಲ್ಲಿಯೂ ಬಸವೇಶ್ವರರ ಹೆಸರು ಬಂದಿರುವದಿಲ್ಲ.

ಈ ಪ್ರಕಾರವಾಗಿ ಮೂಲಗ್ರಂಥ ಯಾವದು? ಅದರ ವ್ಯಾಖ್ಯಾನ ಯಾವದು? ಎಂಬುದರ ಪರಿಜ್ಞಾನವೇ ಇಲ್ಲದೆ, ಶ್ರೀ ದಾಸಗುಪ್ತರು ಹೇಳಿರುವ "Siddhanta-Sikhamani referes to Basava" (A History of Indian Philosophy, Vol. V P. 44) ಎಂಬ ಮಾತನ್ನು ನೋಡಿ ಆಲೋಚಕರು ನಗದಿರಲಾರರು. ಆದ್ದರಿಂದ ಸಿದ್ಧಾಂತಶಿಖಾಮಣಿಯು ಬಸವೇಶ್ವರರ ನಂತರದ ಗ್ರಂಥವೆಂಬ ದಾಸಗುಪ್ತರ ನುಡಿಯು ಪ್ರಮಾಣಶೂನ್ಯವೂ, ಪ್ರಮಾದ (ದೋಷ) ಪೂರ್ಣವೂ ಆಗಿದೆ ಎಂಬುದು ಸಾಮಾನ್ಯರಿಗೂ ತಿಳಿಯುವಂತಿದೆ.

ಶ್ರೀ ದಾಸಗುಪ್ತರು ಮಾಡಿದ ಇನ್ನೊಂದು ಅತಿ ದೊಡ್ಡ ಪ್ರಮಾದ ವೇನೆಂದರೆ—ಶ್ರೀ ಬಸವೇಶ್ವರರು ತಮ್ಮ ತಾರುಣ್ಯಾವಸ್ಥೆಯಲ್ಲಿ ಜನ್ಮಸ್ಥಾನವಾದ ಬಾಗೇವಾಡಿಯನ್ನು ಬಿಟ್ಟು ತನ್ನ ಮಾವನಾದ ಬಲದೇವನಿರುವ ಬಿಜ್ಜಲನ ರಾಜಧಾನಿಯಾದ ಕಲ್ಯಾಣಕ್ಕೆ ಹೋದರೆಂಬುದು ಇತಿಹಾಸವಿದೆ. ಇದನ್ನು ಹೇಳುವಾಗ ಶ್ರೀ ದಾಸಗುಪ್ತರು:—"From his native place Bagevadi, he went to Kalyan near Bombay, at a comparatively young age, when Vijjala was reigning there as King (A.D. 1157-67)" (A History of Indian Philosophy Vol. V.P. 42) ಇಲ್ಲಿ ಬಸವೇಶ್ವರರು ಹೋದ ಕಲ್ಯಾಣವೆಂದರೆ ಬೀದರ ಜಿಲ್ಲೆಯ ಕಲ್ಯಾಣವೆಂದು ಹೇಳದೇ, ಮುಂಬಯಿ ಸಮೀಪದ ಕಲ್ಯಾಣವೆಂದು ಹೇಳಿದ್ದಾರೆ. ಬಿಜ್ಜಲನ ರಾಜಧಾನಿಯಾದ ಕಲ್ಯಾಣವೆಂದರೆ ಮುಂಬಯಿ ಸಮೀಪದ ಕಲ್ಯಾಣವೆಂದು ಹೇಳಿದ ದಾಸಗುಪ್ತರ ಈ ವಾಕ್ಯವನ್ನು ಓದಿದ ಯಾವ ಇತಿಹಾಸಕಾರನು ತಾನೆ ನಗದೇ ಇರಲಾರನು? ಹೀಗೆ ಇತಿಹಾಸ ಹಾಗೂ ಭೌಗೋಲಿಕ ಪ್ರಜ್ಞೆಯೇ ಇಲ್ಲದಿರುವ ದಾಸಗುಪ್ತರ ಮಾತುಗಳು ಪರಿಹಾಸಯೋಗ್ಯಗಳೇವಿನಹ ಸ್ವಾಗತಾರ್ಹಗಳಲ್ಲ. ಆಂಗ್ಲಭಾಷೆಯಲ್ಲಿರುವ ಅವರ ಆ ಪುಸ್ತಕವನ್ನು ನೋಡಿ ಅದನ್ನೇ

ಪ್ರಮಾಣವನ್ನಾಗಿ ಉದಾಹರಿಸಿರುವ ಅನೇಕ ಲೇಖಕರೂ ಇರಬಹುದು. ಆದ್ದರಿಂದ ಸಿದ್ಧಾಂತಶಿಖಾಮಣಿಯು ಶ್ರೀ ಬಸವೇಶ್ವರರ ನಂತರದ ಗ್ರಂಥವೆಂಬ ಮಾತನ್ನು ಆಲೋಚಕರು ಸರ್ವತ್ರ ಖಂಡಿಸಬೇಕು. ಇದೂ ಅಲ್ಲದೇ—

" ನೀನೊಲಿಯಿತ್ತೇ ಪುಣ್ಯ, ನೀನೊಲ್ಲದುದೇ ಪಾಪ;
ಸಕಲ ಜಗದೊಳಗೆ ಅನುಶ್ರುತನಾಗಿಪ್ಪೆಯಯ್ಯಾ
ನೀನೊಲಿದವನೇ ನಿಮ್ಮ ನರಿವನು.

" ಪ್ರಸಾದಾದ್ದೇವತಾಭಕ್ತಿಃ ಪ್ರಸಾದೋ ಭಕ್ತಿಸಂಭವಃ ।
ಯಥೈವಾಂಕುರತೋ ಬೀಜಂ ಬೀಜತೋ ವಾ ಯಥಾಂಕುರಃ ॥"

ಎಂಬುದಾಗಿ ನೀನೊಲಿದವನೇ ಧನ್ಯ,
ಜಗಕ್ಕೆ ಪಾವನ, ಕೂಡಲಸಂಗಮದೇವಯ್ಯಾ''

ಶ್ರೀಬಸವೇಶ್ವರರ ಈ ವಚನದಲ್ಲಿ ಪ್ರಮಾಣರೂಪವಾಗಿ ಉದಾಹರಿಸಿದ ಸಂಸ್ಕೃತ ಶ್ಲೋಕವು ಸಿದ್ಧಾಂತಶಿಖಾಮಣಿಯ ಒಂಬತ್ತನೇ ಪರಿಚ್ಛೇದದ ಹನ್ನೊಂದನೇ ಶ್ಲೋಕವಾಗಿದೆ [ಸಿದ್ಧಾಂತಶಿಖಾಮಣಿಯ ಮೂಲಶ್ಲೋಕದಲ್ಲಿ " ಪ್ರಸಾದಾದೇವ ಸಾ ಭಕ್ತಿಃ" ಎಂದಿದೆ ; ಅದು ಪಾಠ ಭೇದವಾಗಿರಬಹುದು.]

ಹಾಗೆಂದೇ ಬಸವೇಶ್ವರರೇ ತಮ್ಮ ವಚನದಲ್ಲಿ ಸಿದ್ಧಾಂತಶಿಖಾಮಣಿಯ ಶ್ಲೋಕವನ್ನು ಪ್ರಮಾಣರೂಪವಾಗಿ ಉದಾಹರಿಸಿರುವದರಿಂದ, ಸಿದ್ಧಾಂತ ಶಿಖಾಮಣಿಯು ಶ್ರೀಬಸವೇಶ್ವರರಿಗಿಂತಲೂ ಪ್ರಾಚೀನವಾಗಿದ್ದೆಂಬುದಕ್ಕೆ ಶ್ರೀಬಸವೇಶ್ವರರ ವಚನವೇ ಪ್ರಮಾಣವಾಗಿದೆ– ಎಂಬುದು ಶ್ರೀ ಚ. ಸುಂದರೇಶನ್ ಇವರ ಅಭಿಪ್ರಾಯವಾಗಿದೆ. ಇದು ಸತ್ಯವೂ ಅಹುದು.

ಇನ್ನು ಸಿದ್ಧಾಂತಶಿಖಾಮಣಿಯ ತಾಡೋಲೆಯ ಕೆಲವು ಗ್ರಂಥಗಳ ಪ್ರಾರಂಭದಲ್ಲಿ " ಶ್ರೀಗುರು ಬಸವಲಿಂಗಾಯ ನಮಃ " ಎಂಬ ಶೀರ್ಷಿಕೆಯನ್ನು ನೋಡಿ ಈ ಗ್ರಂಥವು ಶ್ರೀಬಸವೇಶ್ವರರ ನಂತರದ್ದೆಂಬ ಶುಷ್ಕವಾದವನ್ನು ಮಾಡುವದುಂಟು. ಇದೂ ಸರಿಯಲ್ಲ. ಯಾಕೆಂದರೆ, ಒಂದುವೇಳೆ ಸದ್ಯಃ ಉಪಲಬ್ಧವಿರುವ ಎಲ್ಲ ತಾಡೋಲೆ ಗ್ರಂಥಗಳ ಪ್ರಾರಂಭದಲ್ಲಿ ಹಾಗೆ ಇದ್ದಿದ್ದರೆ "ತುಷ್ಯತು ದುರ್ಜನನ್ಯಾಯ"ದಿಂದ ಹೇಗಾದರೂ ಒಪ್ಪಬಹುದಾಗಿತ್ತು. ಆದರೆ

ಧಾರವಾಡ ಕರ್ನಾಟಕ ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಪೀಠ ಹಾಗೂ ಕನ್ನಡ ಅನುಸಂಧಾನ ಸಂಸ್ಥಾನ ಈ ಎರಡೂ ಸಂಸ್ಥೆಗಳ ಹಸ್ತಪ್ರತಿಭಂಡಾರದಲ್ಲಿ ಆರು ತಾಡೋಲೆಯ ಸಿದ್ಧಾಂತಶಿಖಾಮಣಿಯ ಪ್ರತಿಗಳನ್ನು ನಾವು ಸ್ವತಃ ಸಂಶೋಧಿಸಿ ಬಂದಿದ್ದೇವೆ. ಆ ಆರು ಗ್ರಂಥಗಳ ಪೈಕಿ ಕೇವಲ ಎರಡು ಗ್ರಂಥಗಳಲ್ಲಿ (ಕ್ರಮಾಂಕ ೯೬೪, ಕನ್ನಡ ಅನುಸಂಧಾನ ಸಂಸ್ಥಾನ. ಕ. ವಿ. ವಿ; ಕ್ರಮಾಂಕ ೧೫೬೦, ಕನ್ನಡ ಅಧ್ಯಯನ ಪೀಠ, ಕ. ವಿ. ವಿ. ಧಾರವಾಡ) ಮಾತ್ರ, 'ಶ್ರೀಗುರು ಬಸವಲಿಂಗಾಯ ನಮಃ' ಎಂದಿದೆ. ಉಳಿದ ನಾಲ್ಕುಗ್ರಂಥಗಳಲ್ಲಿ— ಶ್ರೀಗುರು ರೇವಣಸಿದ್ಧಾಯ ನಮಃ " (ಕ್ರಮಾಂಕ ೧೫೦೭, ಕ. ಅಧ್ಯಯನ. ಪೀ. ಕ. ವಿ. ವಿ.), ಶ್ರೀಗುರು ನಿರಂಜನ ಸಂಗಮಾಯ ನಮಃ" (ಕ್ರಮಾಂಕ ೨೫೪೧, ಕ. ಅ. ಪೀ. ಕ. ವಿ. ವಿ.), " ಶ್ರೀ ಕಾಲಹಸ್ತೀಶ್ವರಾಯ ನಮಃ" (ಕ್ರಮಾಂಕ, ೨೪೬೮, ಕ. ಅ. ಪೀ. ಕ. ವಿ. ವಿ.). " ಶ್ರೀಗುರು ನಾಥಾಯ ನಮಃ" (ಕ್ರಮಾಂಕ ೨೫೭೭, ಕ. ಅ. ಪೀ. ಕ. ವಿ. ವಿ.) — ಈ ರೀತಿಯಾಗಿ ಭಿನ್ನ ಭಿನ್ನ ಶೀರ್ಷಿಕೆಗಳಿವೆ. ಇಲ್ಲಿ ಕಂಸಿನಲ್ಲಿ ಬರೆದ ಸಂಖ್ಯೆಗಳು ಕರ್ನಾಟಕ ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಪೀಠದಲ್ಲಿರುವ ತಾಡೋಲೆ ಗ್ರಂಥಗಳ ಕ್ರಮಸಂಖ್ಯೆಗಳು.

ಇದರಿಂದ ತಿಳಿದುಬರುವದೇನಂದರೆ, ಈ ಎಲ್ಲ ಗ್ರಂಥಗಳೂ ಮೂಲ ಲೇಖಕನಿಂದ ಬರೆಯಲ್ಪಟ್ಟವುಗಳಲ್ಲ; ಆದರೆ, ಪರವರ್ತಿ ಲಿಪಿಕಾರರು ತಮ್ಮ ತಮ್ಮ ಇಷ್ಟದೇವರನ್ನು ಸ್ಮರಿಸಿ, ಗ್ರಂಥಾರಂಭದಲ್ಲಿ ಅವರ ಹೆಸರನ್ನೇ ಬರೆದು ಪ್ರಾರಂಭಿಸಿದ್ದಾರೆ. ಆದ್ದರಿಂದ ಇದಿಷ್ಟರಿಂದ ಸಿದ್ಧಾಂತಶಿಖಾಮಣಿಯು ಶ್ರೀಬಸವೇಶ್ವರರ ನಂತರದ ಗ್ರಂಥವೆನ್ನುವದು ಐತಿಹಾಸಿಕಪ್ರಜ್ಞಾಶೂನ್ಯರಾದವರ ಮಾತೇ ವಿನಹ ಇತಿಹಾಸಜ್ಞರು ಒಪ್ಪುವಂತಹದಲ್ಲ.

ಇದೂ ಅಲ್ಲದೇ, ಡಾ. ಜ. ಚ. ನಿ. ಯವರು ತಮ್ಮ " ಮಣಿಮುಕುರಂ " ಎಂಬ ಗ್ರಂಥದಲ್ಲಿ ಸಿದ್ಧಾಂತಶಿಖಾಮಣಿಯ ಶ್ಲೋಕ ಮತ್ತು ದೇವರದಾಸಿಮಯ್ಯ, ಬಸವೇಶ್ವರ, ಅಕ್ಕಮಹಾದೇವಿ ಹಾಗೂ ಪ್ರಭುದೇವ ಮುಂತಾದ ಶರಣರ ವಚನಗಳನ್ನು ಉದಾಹರಿಸಿ, ಈ ಎಲ್ಲ ಶರಣರ ಮೇಲೆ ಸಿದ್ಧಾಂತಶಿಖಾಮಣಿಯ ಪ್ರಭಾವ ಎಷ್ಟು ಆಗಿತ್ತೆಂಬುದನ್ನು ಬಹು ಸುಂದರವಾಗಿ ಪ್ರತಿಪಾದಿ

ಸಿದ್ದಾರೆ. ಕೆಲ ವಚನಗಳು ಸಾಕ್ಷಾತ್ ಸಿದ್ಧಾಂತಶಿಖಾಮಣಿಯ ಶ್ಲೋಕ
ಅನುವಾದ ಮಾಡಿದಂತಿವೆ.

ಅದರಂತೆ ವೀರಶೈವರ ಷಟ್‌ಸ್ಥಲ ಸಿದ್ಧಾಂತವನ್ನು ಮೊಟ್ಟಮೊದ
ನೂರೊಂದು ಸ್ಥಲಗಳಲ್ಲಿ ಹಂಚಿದವರೆಂದರೆ ಶ್ರೀಶಿವಯೋಗಿಶಿವಾಚಾರ್ಯ
ಇವರ ಈ ಸಿದ್ಧಾಂತಶಿಖಾಮಣಿಯನ್ನು ಆಧಾರವಾಗಿಟ್ಟುಕೊಂಡೇ ಹನ್ನೆರಡ
ಶತಮಾನದ ಶರಣರು ಕನ್ನಡನಾಡಿನ ಜನರಿಗೆ ಆ ನೂರೊಂದರ ನಿಲುವ
ತಿಳಿಸುವದಕ್ಕಾಗಿ ತಮ್ಮ ಅನುಭಾವ ಸಾಹಿತ್ಯವನ್ನು ಬರೆದು ಕನ್ನಡಿಗ
ಮಹದುಪಕಾರವನ್ನು ಮಾಡಿದ್ದಾರೆ. ಈ ಎಲ್ಲ ಸಕಾರಣಗಳಿಂದ ಸಿದ್ಧಾ
ಶಿಖಾಮಣಿಯು ಬಸವಾದಿ ಶರಣರಿಗಿಂತಲೂ ಬಹು ಪ್ರಾಚೀನವೆಂಬ
ಸ್ಪಷ್ಟವಾಗಿ ತಿಳಿದುಬರುತ್ತದೆ.

**ಶ್ರೀಕರಭಾಷ್ಯದ ಆಧಾರದಿಂದ ಸಿದ್ಧಾಂತಶಿಖಾಮಣಿಯ**
**ಕಾಲ ನಿರ್ಣಯ :—**

ಸಿದ್ಧಾಂತಶಿಖಾಮಣಿಯು ಬಸವಾದಿ ಶರಣರಿಗಿಂತಲೂ ಪ್ರಾಚೀ
ವೆಂಬುದು ಸಿದ್ಧವಾಯಿತು. ಆದರೆ ಎಷ್ಟು ಪ್ರಾಚೀನ ಎಂಬುದನ್ನು ಈ
ಪರ್ಯಾಲೋಚಿಸೋಣ.

ಬಾದರಾಯಣರು ಬರೆದ ಬ್ರಹ್ಮಸೂತ್ರಕ್ಕೆ ಶಂಕರ, ರಾಮಾನುಜಾ
ಎಲ್ಲ ಆಚಾರ್ಯರೂ ತಮ್ಮ ತಮ್ಮ ಸಿದ್ಧಾಂತಕ್ಕನುಗುಣವಾಗಿ ಭಾಷ್ಯಗಳನ
ಬರೆದಿದ್ದಾರೆ. ಅದರಂತೆ ಶ್ರೀಪತಿಪಂಡಿತಾರಾಧ್ಯಭಗವತ್ಪಾದರೂ ಸಹ ಬ್ರ
ಸೂತ್ರಕ್ಕೆ ಶಕ್ತಿವಿಶಿಷ್ಟಾದ್ವೈತಸಿದ್ಧಾಂತಪ್ರತಿಪಾದಕವಾದ ವೀರಶೈವ ಭಾ
ವನ್ನು ಬರೆದಿದ್ದಾರೆ. ಆ ಭಾಷ್ಯದ ಅನೇಕ ಕಡೆಗಳಲ್ಲಿ—

" ಪವಿತ್ರಂ ತೇ ಇತಿ ಋಗ್ವೇದ ಮಂತ್ರಸ್ಯ—
ಋಗಿತ್ಯಾಹ ಪವಿತ್ರಂ ತೇ ವಿತತಂ ಬ್ರಹ್ಮಣಸ್ಪತೇ ।
ತಸ್ಮಾತ್ ಪವಿತ್ರಂ ತಲ್ಲಿಂಗಂ ಧಾರ್ಯಂ ಶೈವಮನಾಮಯಮ್ ॥
..................................................................................
ದೀಕ್ಷಯಾ ರಹಿತಃ ಸಾಕ್ಷಾನ್ನಾಪ್ನುಯಾಲ್ಲಿಂಗಧಾರಣಮ್ ॥
ಇತಿ ಸಿದ್ಧಾಂತಶಿಖಾಮಣೌ ಶ್ರೀ ರೇಣುಕಾಚಾರ್ಯೇಣ ಲಿಂಗಧಾರಣಪರತ್ವ
ನಿರ್ದೇಶಾತ್ " (ಬ್ರ. ಸೂ. ಶ್ರೀಕರ. ೧-೧-೧ ಪು. ೧೯) ಹೀಗೆ ಸಿದ್ಧಾ

ಶಿಖಾಮಣಿಯ ಶ್ಲೋಕಗಳನ್ನು ಪ್ರಮಾಣರೂಪವಾಗಿ ಉದಾಹರಿಸಿರುವದರಿಂದ, ಸಿದ್ಧಾಂತಶಿಖಾಮಣಿಯು ಶ್ರೀಪತಿಪಂಡಿತಾರಾಧ್ಯರಿಗಿಂತಲೂ ಪೂರ್ವದ್ದೆಂದು ತಿಳಿದುಬರುತ್ತದೆ.

ಕಾಶಿಯಲ್ಲಿ ಸುಪ್ರಸಿದ್ಧ ವಿದ್ವಾಂಸರೂ ಭಾರತೀಯ ದರ್ಶನಶಾಸ್ತ್ರದ ಇತಿಹಾಸಜ್ಞರೂ ಆದ ಪಂ. ಬಲದೇವ ಉಪಾಧ್ಯರು ತಾವು ಬರೆದ 'ಭಾರತೀಯ ದರ್ಶನ'' ಎಂಬ ಹಿಂದೀ ಗ್ರಂಥದಲ್ಲಿ (ಪುಟ ೪೬೯)ಲ್ಲಿ—ಶ್ರೀಪತಿ ಪಂಡಿತಾರಾಧ್ಯರು ೧೧೬೦ರಲ್ಲಿ ಇದ್ದರು ; ಅವರು ಬರೆದ ಶ್ರೀಕರಭಾಷ್ಯವಾದರೂ ಆಗಲೇ ಪ್ರಸಿದ್ಧವಾಗಿತ್ತು—ಎಂದು ನಮೂದಿಸಿದ್ದಾರೆ.

ಪೂರ್ವದ ಕಾಶೀ ಜಗದ್ಗುರುಗಳಾದ ಶ್ರೀ ೧೦೦೮ ವೀರಭದ್ರಶಿವಾಚಾರ್ಯ ಮಹಾಸ್ವಾಮಿಗಳು (ಚಿದರೇ ಮಠದ ವೀರಭದ್ರಶರ್ಮರು)—ಆಂಧ್ರಪ್ರದೇಶದ ವಿಜಯವಾಡದ ಮಲ್ಲೇಶ್ವರ ದೇವಾಲಯದಲ್ಲಿ ಪಲ್ಲಕೇತ ರಾಜನಿಂದ ಬರೆಸಲ್ಪಟ್ಟ ಶಿಲಾಲೇಖನದ ಆಧಾರದಿಂದ, ಶ್ರೀಪತಿಪಂಡಿತಾರಾಧ್ಯರ ಕಾಲವು ಕ್ರಿ.ಶ. ೧೦೭೦—ಎಂಬುದಾಗಿ ಪ್ರತಿಪಾದಿಸಿದ್ದಾರೆ. (ಶ್ರೀಕರಭಾಷ್ಯ, ಚತುಸ್ಸೂತ್ರಿ, ಪೀಠಿಕಾ. ಪು. ೯ ಜಂಗಮವಾಡಿ ಮಠ ಪ್ರಕಾಶನ)

ಒಟ್ಟಿನಲ್ಲಿ ಶ್ರೀಪತಿಪಂಡಿತಾರಾಧ್ಯರು ೧೧ ನೇ ಶತಮಾನದಲ್ಲಿ ಇದ್ದು, ಶ್ರೀಕರಭಾಷ್ಯವನ್ನು ರಚಿಸಿರುವದರಿಂದ, ಅದರಲ್ಲಿ ಪ್ರಮಾಣವಾಗಿ ಉದಾಹರಿಸಲ್ಪಟ್ಟ ಸಿದ್ಧಾಂತಶಿಖಾಮಣಿಯು ೧೦ ನೇ ಶತಮಾನಕ್ಕಿಂತಲೂ ಪ್ರಾಚೀನವಾದುದೆಂಬುದು ನಿರ್ವಿವಾದವು.

ಇದೂ ಅಲ್ಲದೇ, ೧೦ ನೇ ಶತಮಾನದ ಶ್ರೀಕಂಠಾಚಾರ್ಯರು ತಮ್ಮ 'ಶ್ರೀಕಂಠಭಾಷ್ಯ'ದ "ಅವಿಭಾಗೇನ ದೃಷ್ಟತ್ವಾತ್'' ಎಂಬ ಬ್ರಹ್ಮಸೂತ್ರದ ಭಾಷ್ಯವನ್ನು ಬರೆಯುವಾಗ, "ಮುಕ್ತಃ ಶಿವಸಮೋ ಭವೇತ್" (ಸಿ. ಶಿ. ೯–೧೪, ಪು. ೧೪೧) ಎಂಬ ಸಿದ್ಧಾಂತಶಿಖಾಮಣಿಯ ಅಂಶವನ್ನು ಪ್ರಮಾಣವಾಗಿ ಉದಾಹರಿಸಿರುವುದನ್ನು ಕಾಣುತ್ತೇವೆ. ಆಂದಬಳಿಕ, ಸಿದ್ಧಾಂತಶಿಖಾಮಣಿಯು ೧೦ ನೇ ಶತಮಾನಕ್ಕಿಂತಲೂ ಪ್ರಾಚೀನವೆಂಬುದು ಸಹಜವಾಗಿಯೇ ಸ್ಪಷ್ಟಗೊಳ್ಳುತ್ತದೆ.

ಇನ್ನು, ಗುರುವಂಶಕಾವ್ಯ, ಶಿವತತ್ತ್ವರತ್ನಾಕರ ಗ್ರಂಥಗಳಲ್ಲಿ, ಶ್ರೀರೇಣುಕರ ಅಪರಾವತಾರಿಯಾದ ಶ್ರೀ ಜ. ರೇವಣಸಿದ್ಧರಿಂದ ಆದ್ಯಶಂಕರಾಚಾರ್ಯರಿಗೆ,

ಚಂದ್ರಮೌಳೀಶ್ವರಲಿಂಗ ಹಾಗೂ ರತ್ನಗರ್ಭಗಣಪತಿಯು ಕೊಡಲ್ಪಟ್ಟ
ವಿಷಯವು ಉಕ್ತವಾಗಿದೆಯಷ್ಟೆ! ಆದರೆ ಇದು ಶ್ರೀಶಿವಯೋಗಿಶಿವಾಚಾರ್ಯ
ರಿಗೆ ಗುರುತಿಲ್ಲ; ಇಲ್ಲವಾದರೆ— ಈಶಾಸ್ಯಗುರು, ಚತುರ್ಮುಖ ಬ್ರಹ್ಮ
ಮುಂತಾದವರು ತಮ್ಮ ರೇಣುಕಚಂಪೂ, ರೇವಣಸಿದ್ಧೇಶ್ವರಪುರಾಣಾದಿಗಳ
ಶ್ರೀರೇವಣಸಿದ್ಧೇಶ್ವರರ ಲೀಲೆಗಳ ವರ್ಣನೆಯನ್ನು ಮಾಡುವಾಗ, ಶ್ರೀರೇವಣ
ಸಿದ್ಧಮಹಾಯೋಗಿಯಿಂದ ಆದ್ಯಶಂಕರಾಚಾರ್ಯರಿಗೆ ಚಂದ್ರಮೌಳೀಶ್ವ
ಲಿಂಗಪ್ರದಾನವನ್ನು ನಿರೂಪಿಸಿರುವಂತೆಯೇ, ಶ್ರೀಶಿವಯೋಗಿಶಿವಾಚಾರ್ಯ
ರಾದರೂ ಈ ವಿಷಯವನ್ನು ಗ್ರಂಥದ ಕೊನೆಯ ಭಾಗದಲ್ಲಿ ಮೂರುಕೋಟಿ
ಶಿವಲಿಂಗಗಳ ಪ್ರತಿಷ್ಠಾಪನೆಯನ್ನು ಪ್ರತಿಪಾದನೆ ಮಾಡಿರುವಂತೆ ಇದನ್ನಾ
ದರೂ ಪ್ರತಿಪಾದಿಸಬಹುದಿತ್ತು. ಆದ್ದರಿಂದ ಶಿವಯೋಗಿಶಿವಾಚಾರ್ಯರು ಆದ್ಯ
ಶಂಕರಾಚಾರ್ಯರಿಗಿಂತಲೂ ಮೊದಲಿಗರೆಂದು ಊಹಿಸಬಹುದಾಗಿದೆ. ಇವೆಲ್ಲವು
ಗಳ ಆಧಾರದಿಂದ ಶ್ರೀ ಶಿವಯೋಗಿಶಿವಾಚಾರ್ಯರು ಕ್ರಿ. ಶ. ೮ನೇ ಶತಮಾನ
ಕ್ಕಿಂತಲೂ ಪೂರ್ವದವರೆಂಬಲ್ಲಿ ಸಂದೇಹವಿಲ್ಲ.

ವೀರಶೈವ ಧರ್ಮವನ್ನೇ ತಮ್ಮ ಜೀವಾಳವನ್ನಾಗಿ ಮಾಡಿಕೊಂಡಿದ್ದ
ನಾಗನೂರು ಬೃಹನ್ಮಠಾಧ್ಯಕ್ಷರಾದ ಶ್ರೀ ವೇ. ಪಂ. ಕಾಶೀನಾಥಶಾಸ್ತ್ರಿಗಳು—

ಯೇನ ರಕ್ಷಾವತೀ ಜಾತಾ ಶಿವಭಕ್ತಿಃ ಸನಾತನೀ ।
ಬೌದ್ಧಾದಿಪ್ರತಿಸಿದ್ಧಾಂತಮಹಾಧ್ವಾಂತಾಂಶುಮಾಲಿನಾ ॥

(ಸಿ. ಶಿ. ೧–೨೪)

ಈ ಶ್ಲೋಕದಲ್ಲಿ ಶಿವಯೋಗಿಶಿವಾಚಾರ್ಯರು ತಮ್ಮನ್ನು ಬೌದ್ಧಾದಿ ನಾಸ್ತಿಕ
ಮತಗಳೆಂಬ ಕತ್ತಲೆಯನ್ನು ಹೊಡೆದೋಡಿಸುವ ಸೂರ್ಯನನ್ನಾಗಿ ಹೇಳಿಕೊಂಡಿ
ದ್ದಾರೆ. ಭಾರತದಲ್ಲಿ ಸುಮಾರು ಇಂದಿಗೆ ಎರಡುಸಾವಿರ ವರ್ಷಗಳ ಪೂರ್ವದಲ್ಲಿ
ಬೌದ್ಧಮತದ ಪ್ರಚಾರವು ಪ್ರಬಲವಾಗಿದ್ದುದರಿಂದ ಶಿವಯೋಗಿಶಿವಾಚಾರ್ಯ
ಹಾಗೂ ಅವರ ಕೃತಿಯಾದ ಸಿದ್ಧಾಂತಶಿಖಾಮಣಿಯ ಕಾಲವು ಎರಡುಸಾವಿರ
ವರ್ಷ ಪ್ರಾಚೀನವಾದದ್ದು—ಎಂಬ ತರ್ಕವನ್ನು ನಿರೂಪಿಸಿದ್ದಾರೆ. ಸಿ. ಶಿ.
ಪ್ರಸ್ತಾವನೆ ಪು. ೭. ಮೈಸೂರು, ಕಾಶೀನಾಥ ಗ್ರಂಥಮಾಲಾ ೧೯೩೬ ಇಸವಿ

ಅದೇ ಪ್ರಕಾರ ಶ್ರೀಶೈಲ ಗಿರಿರಾಜ ಸೂರ್ಯಸಿಂಹಾಸನಾಧೀಶ್ವರ
ಶ್ರೀ ೧೦೦೮ ಜಗದ್ಗುರು ವಾಗೀಶ ಪಂಡಿತಾರಾಧ್ಯಶಿವಾಚಾರ್ಯ ಭಗವತ್ಪಾದ

ಶಾದರೂ—“ ಶ್ರೀ ರೇಣುಕ ಸಂಪ್ರದಾಯಕನೂ, ಸಿದ್ಧಾಂತಶಿಖಾಮಣಿಯ ಕರ್ತೃವೂ ಆದ ಶಿವಯೋಗಿಶಿವಾಚಾರ್ಯನು, ಬೌದ್ಧಮತದ ವಿರೋಧಿಯಾಗಿದ್ದನೆಂದು ತಾನೇ ಹೇಳಿಕೊಂಡಿರುವದರಿಂದಲೂ, ಶಂಕರಾಚಾರ್ಯರ ಕಾಲದ ಮತ್ತು ಸಿದ್ಧರಾಮೇಶ್ವರನ ಕಾಲದ, ರೇವಣಸಿದ್ಧರ ಚರಿತ್ರೆಯನ್ನು ಸಿದ್ಧಾಂತ ಶಿಖಾಮಣಿಯಲ್ಲಿ ಕಾಣಿಸದೇ ಇರುವದರಿಂದಲೂ, ಈ ಶಿವಯೋಗಿಶಿವಾಚಾರ್ಯನ ಕಾಲವು ೨ ಸಾವಿರ ವರ್ಷಕ್ಕೆ ಪೂರ್ವ ಹೋಗುವದು.’’ (ಸಿದ್ಧಾಂತಶಿಖಾಮಣಿಯ ಸತ್ಯಾರ್ಥಪ್ರಕಾಶ, ಪುಟ ೨). ಹೀಗೆ ತಮ್ಮ ಸೂಕ್ತವಾದ ಅಭಿಪ್ರಾಯವನ್ನು ಅಪ್ಪಣೆಕೊಡಿಸಿದ್ದಾರೆ.

ಈ ಎಲ್ಲ ವಿದ್ವಾಂಸರ, ಮಹಾಸ್ವಾಮಿಗಳವರ ಅಭಿಪ್ರಾಯದ ಪ್ರಕಾರ, ಸಿದ್ಧಾಂತಶಿಖಾಮಣಿಯು ಎರಡುಸಾವಿರವರ್ಷ ಪ್ರಾಚೀನವಾದದ್ದೆಂದು ಊಹಿಸಬಹುದಾದರೂ, ಎಂಟನೇ ಶತಮಾನಕ್ಕಿಂತಲೂ ಪ್ರಾಚೀನ ಎಂಬುದರಲ್ಲಿ ಅದಾವ ಸಂದೇಹವೂ ಇಲ್ಲ.

## ಶ್ರೀ ಶಿವಯೋಗಿಶಿವಾಚಾರ್ಯರ ದೇಶ ವಿಚಾರ :—

ಶ್ರೀಶಿವಯೋಗಿಶಿವಾಚಾರ್ಯರು ಈ ಗ್ರಂಥದಲ್ಲಿ ಎಲ್ಲಿಯು ತಮ್ಮ ಜನ್ಮಸ್ಥಾನದ ಉಲ್ಲೇಖವನ್ನು ಮಾಡಿರುವದಿಲ್ಲ. ಆದರೆ ಇವನ ಅಜ್ಜನ ಹೆಸರು “ ಮುದ್ದದೇವ ” ಎಂದು ಇದ್ದುದರಿಂದ, ಇವನು ಕರ್ನಾಟಕದವನೇ ಇರಬೇಕು. ಮುದ್ದ ಮುದ್ದು—ಈ ಶಬ್ದಗಳು ಪ್ರೀತಿಚಾಚಕಗಳಾಗಿ ಕನ್ನಡದಲ್ಲಿ ಬಳಕೆಯಲ್ಲಿರುತ್ತವೆ. ಎಂಬ ಅಭಿಪ್ರಾಯವನ್ನು ಲಿಂ. ವೇ. ಪಂ. ಕಾಶೀನಾಥಶಾಸ್ತ್ರಿಗಳವರು ಪ್ರತಿಪಾದಿಸಿದ್ದಾರೆ.

ಡಾ. ಜ. ಚ. ನಿ. ಯವರು, ತಮ್ಮ ಸಿದ್ಧಾಂತಶಿಖಾಮಣಿಯ ಸೌಂದರ್ಯದರ್ಶನವೆಂಬ ಗ್ರಂಥದ ಪೀಠಿಕೆಯಲ್ಲಿ, ಶ್ರೀಶಿವಯೋಗಿಶಿವಾಚಾರ್ಯರ ದೇಶವು ಕರ್ನಾಟಕ ಪ್ರದೇಶವೆಂಬುದನ್ನು ತಿಳಿಸಿ, ಬಿಜಾಪುರ ಜಿಲ್ಲೆಯ “ ಸಾಲೋಟಗಿ’’ ಗ್ರಾಮದ ಸಂಸ್ಕೃತ ವಿದ್ಯಾಪೀಠದ ಪ್ರಾಚಾರ್ಯರಾಗಿದ್ದರೆಂಬ ವಿಚಾರವನ್ನು ವ್ಯಕ್ತಪಡಿಸಿದ್ದಾರೆ. ಈ ಸಾಲೋಟಗಿ ಗ್ರಾಮದಲ್ಲಿ ಪ್ರಾಚೀನವಾದ ಸಂಸ್ಕೃತ ಶಿಕ್ಷಣ–ಸಂಸ್ಥೆ ಇತ್ತೆಂಬುದಕ್ಕೆ ಸಾಕಷ್ಟು ಅವಶೇಷಗಳಿವೆ. ಇದೂ ಅಲ್ಲದೇ, ಆ ಗ್ರಾಮದಲ್ಲಿ ಶ್ರೀಶಿವಯೋಗಿಶ್ವರರ ಸಮಾಧಿಯೂ ಇದೆ. ಈ ವಿಷಯದಲ್ಲಿ ಇನ್ನೂ ಅನೇಕಜನ ವಿದ್ವಾಂಸರೂ, ಇತಿಹಾಸಜ್ಞರೂ,

ನಿಷ್ಪಕ್ಷಪಾತದಿಂದ ವಿಚಾರಮಾಡಿ, ಒಂದು ಸೂಕ್ತವಾದ ಸರ್ವಸಮ್ಮತವಾ
ನಿರ್ಣಯವನ್ನು ಸಮಾಜಕ್ಕೆ ಒಪ್ಪಿಸುವದು ಇವರೆಲ್ಲರ ಕರ್ತವ್ಯವಾಗಿ
ಈ ದಿಶೆಯಲ್ಲಿ ಇನ್ನೂ ಸಂಶೋಧನೆಯು ಆವಶ್ಯಕವೆಂಬುದನ್ನು ತಿಳಿಸಿ ಕವಿ
ದೇಶ ಕಾಲಗಳ ಅಲ್ಪಪರಿಚಯವನ್ನು ಇಲ್ಲಿಗೆ ಮುಗಿಸುತ್ತೇವೆ.

**ಗ್ರಂಥವಿಷಯ :—**

"ಸಿದ್ಧಾಂತಶಿಖಾಮಣಿ ಪ್ರವಚನಪ್ರಭೆ ಪೂರ್ವಪೀಠಿಕಾ" ಎಂಬ ಹೆಸ
ಈ ಗ್ರಂಥದಲ್ಲಿ ಸಿದ್ಧಾಂತಶಿಖಾಮಣಿಯ ಪ್ರಥಮ ಪರಿಚ್ಛೇದದಿಂದ ೫ನೆ
ಪರಿಚ್ಛೇದದ ೩೦ ನೇ ಶ್ಲೋಕದ ವರೆಗಿನ ಗ್ರಂಥಭಾಗದಲ್ಲಿ ಬರುವ ಎಲ್ಲ ಶ್ಲೋ
ಗಳಿಗೆ ಶಬ್ದಾರ್ಥ ಹಾಗೂ ತಾತ್ಪರ್ಯವನ್ನು ಬರೆಯಲಾಗಿದೆ. ಇದೂ ಅಲ್ಲದೆ
ಅಲ್ಲಲ್ಲಿ ವಿಶೇಷ ವಿಚಾರಗಳನ್ನೂ ಬರೆದು ಗ್ರಂಥದ ರಹಸ್ಯಾರ್ಥವನ್ನೂ ಪ್ರಕ
ಗೊಳಿಸಲಾಗಿದೆ. ಈ ಗ್ರಂಥದಲ್ಲಿ ವೀರಶೈವ ಸಿದ್ಧಾಂತಾಭಿಮತಗಳಾ
ಮೂವತ್ತಾರು ತತ್ತ್ವಗಳ ವಿಶ್ಲೇಷಣೆಯನ್ನು ಶಿವಾದ್ವೈತಮಂಜರಿ ಗ್ರಂಥ
ಸಹಾಯದಿಂದ ಯಥಾಮತಿ ಪ್ರಸ್ತಾಪಿಸಿದ್ದೇವೆ. ಈಗಾಗಲೇ ಪ್ರಕಟಗೊಂಡಿರು
೧—೪ ಕಿರಣಗಳು ಜನಾನುರಾಗವನ್ನು ಪಡೆದಂತೆ, ಈ ಪೂರ್ವಪೀಠಿಕಾಭಾಗವು
ಸಹ ವಾಚಕರ ಅನುರಾಗವನ್ನು ಸಂಪಾದಿಸುವದೆಂಬ ಭರವಸೆಯುಳ್ಳವರಾ
ದ್ದೇವೆ. ಈ ಗ್ರಂಥಕ್ಕೆ ಆಶೀರ್ವಚನವನ್ನು ದಯಪಾಲಿಸಿದ ಶ್ರೀಕಾಶೀಜಗದ್ಗು
ಗಳಿಗೆ ಹಾಗೂ, ಡಂಬಳ ಶ್ರೀ ತೋಂಟದಾರ್ಯ ಸಂಸ್ಥಾನ ಮಠಾಧೀಶ್ವ
ಶ್ರೀ ನಿ. ಜ. ತೋಂಟದ ಸಿದ್ಧಲಿಂಗಸ್ವಾಮಿಗಳವರಿಗೆ ಅನಂತ ನಮಸ್ಕಾರಗಳನ್ನು
ಸಮರ್ಪಿಸುತ್ತೇವೆ. ನಮ್ಮ ಈ ಕಾರ್ಯದಲ್ಲಿ ಬಹುವಿಧದಲ್ಲಿ ಸಹಾಯಕರಾ
ಮೈಸೂರು ಮಹಾರಾಜ ಸಂಸ್ಕೃತ ಕಾಲೇಜಿನ ಅಲಂಕಾರಶಾಸ್ತ್ರದ ಪ್ರಾಧ್ಯಾಪ
ರಾದ ಶ್ರೀ ವೇ. ಪಂ ಬ. ರಾಜಶೇಖರಯ್ಯನವರಿಗೆ, ಗುಳೇದಗುಡ್ಡ ಬಾಲಿಕೆಯ
ಪ್ರೌಢಶಾಲೆಯ ಅಧ್ಯಾಪಕರಾದ ಶ್ರೀದೇವಾಂಗಮಠರಿಗೆ, ಪ್ರೆಸ್ಸಿನ ಮಾಲಿಕರಾ
ಶ್ರೀ ಬಿ. ಎಂ. ಸಿದ್ದೇಶ್ವರಯ್ಯನವರಿಗೆ, ಪ್ರೆಸ್ಸಿನ ಸಿಬ್ಬಂದಿವರ್ಗದವರಿಗೆ ಹಾಗು
ಮುಖಪುಟ ಮುದ್ರಣ ದಾನಿಗಳಾದ ಶ್ರೀ ಬಸಪ್ಪನವರು. ಬ. ನಿಲೂಗಲ್,
ಕೆರೂರ ಇವರೆಲ್ಲರಿಗೂ ಶ್ರೀಕಾಶೀವಿಶ್ವನಾಥಾನ್ನಪೂರ್ಣಾದೇವಿಯರು ಆಯು
ರಾರೋಗ್ಯಭಾಗ್ಯಗಳನ್ನು ಕೊಟ್ಟು ಕಾಪಾಡಲೆಂದು ಹಾರೈಸುತ್ತೇವೆ.

ಶ್ರೀ ಜ. ರೇಣುಕಜಯಂತಿ,
೨೪—೩—೧೯೬೬

ಇತಿ ಶಿವಂ

ಷ. ಬ್ರ. ಚಂದ್ರಶೇಖರಶಿವಾಚಾರ್ಯ.

# ದಾನಿಗಳ ಪರಿಚಯ

"ಸಿದ್ಧಾಂತಶಿಖಾಮಣಿ-ಪ್ರವಚನಪ್ರಭೆ"ಯ (ಪೂರ್ವಪೀಠಿಕಾಭಾಗ) ರೂಪವಾದ ಈ ಗ್ರಂಥದ ಮುದ್ರಣಸೇವೆಯನ್ನು ಬಳ್ಳಾರಿ ಜಿಲ್ಲಾ ಹಲಕುಂದಿ ಗ್ರಾಮದ ಶ್ರೀಮಾನ್ ಹೆಚ್. ಜಂಬಣ್ಣನವರು ವಹಿಸಿಕೊಂಡಿರುತ್ತಾರೆ. ಬಳ್ಳಾರಿ ಹಾಗೂ ಸುತ್ತಮುತ್ತಲಿನ ಪ್ರದೇಶವು ಪಂಚಾಚಾರ್ಯರ ಮತ್ತು ಶರಣರ ಪಾದಧೂಳಿಯಿಂದ ಪರಮ ಪವಿತ್ರವಾದದ್ದಾಗಿದೆ. ಶ್ರೀಮಾನ್ ಹೆಚ್. ಜಂಬಣ್ಣನವರು "ಕಾಯಕವೇ ಕೈಲಾಸ" ವೆಂಬ ಶರಣರ ಅನುಭಾವದ ನುಡಿಯನ್ನೇ ಅನುಸರಿಸಿ, ಬಳ್ಳಾರಿಯಲ್ಲಿ ಶೇಂಗಾವ್ಯಾಪಾರವನ್ನು ತಮ್ಮ ಜೀವನದ ಕಾಯಕವನ್ನಾಗಿ ಮಾಡಿಕೊಂಡು ಸೇವಾನಿಷ್ಠರಾಗಿದ್ದಾರೆ. ಈ ವ್ಯಾಪಾರದ ಜೊತೆಗೆ ತಮ್ಮ ಸ್ವಂತಗ್ರಾಮವಾದ ಹಲಕುಂದಿಯಲ್ಲಿ "ಕೋಟಿ ವಿದ್ಯೆಯಲ್ಲಿ ಮೇಟಿ ವಿದ್ಯೆಯೇ ಮೇಲು" ಎನ್ನುವ ವಚನದಂತೆ ಒಕ್ಕಲುತನವನ್ನೂ ಸಾಗಿಸಿಕೊಂಡು ಹೊರಟಿದ್ದಾರೆ.

ಹಲಕುಂದಿಯ ಶರಣ ದಂಪತಿಗಳಾದ ಲಿಂ. ಶ್ರೀಮಾನ್ ಗೊಂಚಿಗಾರ ಕಾಶಪ್ಪ ಮತ್ತು ಸೌ|| ಗಾದೆಮ್ಮ ಇವರ ಪವಿತ್ರ ಗರ್ಭದಲ್ಲಿ ತೃತೀಯ ಪುತ್ರರತ್ನರಾಗಿ ಶ್ರೀ ಜಂಬಣ್ಣನವರು ಜನಿಸಿದರು. ಶಿಕ್ಷಣವನ್ನು ತಕ್ಕಮಟ್ಟಿಗೆ ಮಾಡಿದ ಇವರು, ಪ್ರಸ್ತುತ ಬಳ್ಳಾರಿಯಲ್ಲಿಯೇ ವ್ಯಾಪಾರ ಕಾಯಕನಿಷ್ಠರಾಗಿ ನಿವಾಸಗೈದಿದ್ದಾರೆ.

ವ್ಯವಹಾರ ಕುಶಲರಾದ ಇವರ ವಿವಾಹವು ಬಳ್ಳಾರಿಯ ಸೋಮನಗೌಡರ ಮಗಳಾದ ಸೌ|| ಗಿರಿಜಮ್ಮನವರ ಜೊತೆಗೆ ಶಾಸ್ತ್ರೋಕ್ತ ಪದ್ಧತಿಯಂತೆ ನೆರವೇರಿತು. ಕಾಲಕ್ರಮಿಸಿದಂತೆ ಈ ದಂಪತಿಗಳಿಗೆ—ಶ್ರೀ ಮಲ್ಲಿಕಾರ್ಜುನ, ಶ್ರೀ ರಘುನಾಥ, ಶ್ರೀ ಕಾಶೀನಾಥ ಎಂಬ ಮೂರು ಜನ ಗಂಡುಮಕ್ಕಳು, ಕು. ದಾಕ್ಷಾಯಣಿ ಎಂಬ ಓರ್ವ ಹೆಣ್ಣುಮಗಳು—ಹೀಗೆ ನಾಲ್ಕುಜನ ಸುಸಂಸ್ಕಾರವುಳ್ಳ ಮಕ್ಕಳು ಜನಿಸಿದರು

ವಿಧಿವಿಲಾಸವು ಯಾರನ್ನೂ ಬಿಡುವಂತಿಲ್ಲ. ಶ್ರೀ. ಹೆಚ್. ಜಂಬಣ್ಣನವರ ಮಾತೃಶ್ರೀಯವರಾದ ಶ್ರೀಮತಿ ಗಾದೆಮ್ಮನವರು ಮತ್ತು ಸಹಧರ್ಮ-

ಚಾರಿಣಿಯಾದ ಸೌ. ಗಿರಿಜಮ್ಮನವರು ಶಿವಾಧೀನರಾದಬಳಿಕ, ನೊಂದ ಮ
ಸ್ಕರಾದ ಇವರು, ತಮ್ಮ ವ್ಯವಹಾರ ಹಾಗೂ ಮನೆತನದ ಜವಾಬ್ದಾರಿಯನ್ನು
ಜ್ಯೇಷ್ಠಪುತ್ರರಾದ ಶ್ರೀಮಾನ್ ಮಲ್ಲಿಕಾರ್ಜುನಪ್ಪ ಇವರ ಮೇಲೆ ಇ
ನಿವೃತ್ತಿಪರ ಮಾರ್ಗದಲ್ಲಿ ಕಾಲಕಳೆಯುತ್ತಿದ್ದಾರೆ.

ಶ್ರೀ ಮಲ್ಲಿಕಾರ್ಜುನಪ್ಪ ಇವರ ವಿವಾಹವು ನಿವೃತ್ತ ಡೆಪ್ಯೂಟಿ ತಹಸೀ
ದಾರರಾದ ಶ್ರೀಮಾನ್ ಐದೇಕಲ್ಲ ಚನ್ನಬಸಪ್ಪನವರ ಮಗಳಾದ ಸೌ
ಶಶಿಕಲಾ ಇವರೊಡನೆ ಮಹಾ ವೈಭವದಿಂದ ನೆರವೇರಿತು. "ಸತಿ-ಪ
ಗಳೊಂದಾದ ಭಕ್ತಿ ಹಿತವಪ್ಪುದು ಶಿವಂಗೆ" ಎಂಬ ರೀತಿಯಲ್ಲಿ ಸೌ|| ಶಶಿಕಲಾ
ಇವರು ಮನೆತನದ ಜವಾಬ್ದಾರಿಯನ್ನು ದಕ್ಷತೆಯಿಂದ ನಿರ್ವಹಿಸುತ್ತಿದ್ದ
ಶ್ರೀ ಮಲ್ಲಿಕಾರ್ಜುನ ಇವರು ವ್ಯವಹಾರದ ಜವಾಬ್ದಾರಿಯನ್ನು ಹೊತ್ತು
ಮುನ್ನಡಿ ಇಡುತ್ತಿದ್ದಾರೆ.

ತರುಣರೂ, ಉತ್ಸಾಹಿಗಳೂ, ಸಾಮಾಜಿಕ ಕಾರ್ಯಕರ್ತರೂ ಆ
ಶ್ರೀ ಮಲ್ಲಿಕಾರ್ಜುನಪ್ಪನವರ ವ್ಯವಹಾರ ಕುಶಲತೆಯನ್ನು ಕಂಡು ಶ್ರೀಶೈ
ಸೂರ್ಯಸಿಂಹಾಸನಾಧೀಶ್ವರ ಶ್ರೀ ೧೦೦೮ ಜಗದ್ಗುರು ಉಮಾಪತಿ ಪಂಡಿತಾ
ರಾಧ್ಯಶಿವಾಚಾರ್ಯ ಮಹಾಸ್ವಾಮಿಗಳವರು ಬಳ್ಳಾರಿಯಲ್ಲಿ ನೂತನವಾ
ಸ್ಥಾಪಿತವಾಗಿರುವ ಶ್ರೀಜಗದ್ಗುರು ಪಂಚಾಚಾರ್ಯ ಸಾಂಸ್ಕೃತಿಕ ಸೇವಾಸಂಘ
ಸೆಕ್ರೆಟರಿಯನ್ನಾಗಿ ಮಾಡಿ ಆಶೀರ್ವದಿಸಿದ್ದಾರೆ.

ಈ ಸಂಘವು ಸಂಸ್ಥಾಪಿತವಾಗಿ ಕೆಲವೇ ದಿನಗಳಾಗಿದ್ದರೂ, ಎಲ್ಲ ಸದಸ್ಯ
ಹಾಗೂ ಸೆಕ್ರೆಟರಿಯಾದ ಶ್ರೀ ಮಲ್ಲಿಕಾರ್ಜುನಪ್ಪನರ ಕಾರ್ಯಕುಶಲತೆಯ
ಪರಿಣಾಮವಾಗಿ, ೧೯೮೫ ರ ನವರಾತ್ರಿಯಲ್ಲಿ ಶ್ರೀದೇವೀಪುರಾಣದ ಕಾರ್ಯ
ಕ್ರಮವು ಮಹಾವೈಭವದಿಂದ ನೆರವೇರಿ, ಜನಮನದಲ್ಲಿ ಒಳ್ಳೆಯ ಸಂಸ್ಕಾರ
ವನ್ನು ಉಂಟುಮಾಡಿತು.

ಹಿರಿಯರ ಮಾರ್ಗದರ್ಶನದಲ್ಲಿ ನಡೆಯುವ ಮಕ್ಕಳ ವರ್ತನೆಯನ್ನು
ಕಂಡ ಶ್ರೀ ಜಂಬಣ್ಣನವರು ತಮ್ಮ ಗೃಹಸ್ಥಜೀವನವು ಸಾರ್ಥಕವಾಯಿತು
ಎಂಬ ಭಾವದಲ್ಲಿ ಸಂತೃಪ್ತಿಯ ಜೀವನ ಸಾಗಿಸುತ್ತಲಿದ್ದಾರೆ.

ಧರ್ಮಪ್ರೇಮಿಗಳೂ, ಉದಾರ ಹೃದಯದವರೂ ಆದ ಶ್ರೀ ಹೆಚ್. ಜಂಬಣ್ಣನವರು ತಮ್ಮ ಲಿಂ. ತಂದೆತಾಯಿಗಳ ಹಾಗೂ ಲಿಂ. ಸಹಧರ್ಮಚಾರಿಣಿ ಸೌ|| ಗಿರಿಜಮ್ಮನವರ ಸ್ಮರಣಾರ್ಥವಾಗಿ ಈ ಪುಸ್ತಕದ ಮುದ್ರಣದ ಸಂಪೂರ್ಣ ವೆಚ್ಚವನ್ನು ಸ್ವಸಂತೋಷದಿಂದ ನಿರ್ವಹಿಸಿ, ಧರ್ಮಕ್ಷೇತ್ರದಲ್ಲಿ ಬಹು ದಿಟ್ಟಹೆಜ್ಜೆಯನ್ನಿಟ್ಟದ್ದಾರೆ. ಶ್ರೀಜಗದ್ಗುರು ಪಂಚಾಚಾರ್ಯರು ಇವರಿಗೆ ಹಾಗೂ ಇವರ ಚಿರಂಜೀವಿಗಳಿಗೆ ಆಯುರಾರೋಗ್ಯಭಾಗ್ಯಗಳನ್ನು ಕೊಟ್ಟು ಕಾಪಾಡಲೆಂದು ಹಾರೈಸುತ್ತೇವೆ.

ಇತಿ ಶಿವಮ್.

# ಸಿದ್ಧಾಂತಶಿಖಾಮಣಿ—ಪ್ರವಚನಪ್ರಭೆ

## ಪೂರ್ವ ಪೀಠಿಕಾ

### ಪ್ರಥಮಪರಿಚ್ಛೇದ

### ಅವತರಣಿಕಾ

ಅನೇಕವಿಧಸಿದ್ಧಾಂತಶಿಖಾಮಣಿಮನಾಮಯಮ್ ।
ಶ್ರೀವೀರಶೈವಸಿದ್ಧಾಂತಮೇಕೋತ್ತರಶತಸ್ಥಲಮ್ ॥

ರೇಣುಕಾಗಸ್ತ್ಯಸಂವಾದಂ ನಿಗಮಾಗಮವಿಶ್ರುತಮ್ ।
ಪ್ರದೀಪಯತಿ ಗುಪ್ತಾರ್ಥಮುದ್ಧೃತ್ಯ ಶಿವಯೋಗಿರಾಟ್ ॥

(ಶ್ರೀ ಮರಿತೋಂಟದಾರ್ಯರ ವ್ಯಾಖ್ಯಾನದ ಪ್ರಾರಂಭ ಶ್ಲೋಕಗಳು-ಯುಗ್ಮಕ)

ಅರ್ಥ : ಅನೇಕವಿಧ ಸಿದ್ಧಾಂತಶಿಖಾಮಣಿಂ=ಅನೇಕ ಪ್ರಕಾರದ ಸಿದ್ಧಾಂತಗಳಿಗೆಲ್ಲ ಶಿಖಾಮಣಿಯೋಪಾದಿಯಲ್ಲಿರುವ, ಅನಾಮಯಮ್=ದೋಷರಹಿತವಾದ, ಏಕೋತ್ತರಶತಸ್ಥಲಮ್=ನೂರೊಂದು ಸ್ಥಲಗಳಿಂದ ಕೂಡಿರುವ, ನಿಗಮಾಗಮವಿಶ್ರುತಂ=ವೇದಾಗಮಗಳಲ್ಲಿ ಪ್ರಸಿದ್ಧವಾದ, ರೇಣುಕಾಗಸ್ತ್ಯಸಂವಾದಂ=ಶ್ರೀಜಗದ್ಗುರು ರೇಣುಕ ಭಗವತ್ಪಾದರ ಹಾಗೂ ಶ್ರೀ ಅಗಸ್ತ್ಯಮಹರ್ಷಿಗಳ ಸಂವಾದರೂಪದಲ್ಲಿರುವ, ಶ್ರೀ ವೀರಶೈವ ಸಿದ್ಧಾಂತಂ=ವೀರಶೈವಸಿದ್ಧಾಂತವನ್ನು, ಶಿವಯೋಗಿರಾಟ್=ಶಿವಯೋಗಿಶಿವಾಚಾರ್ಯರು, ಗುಪ್ತಾರ್ಥಮುದ್ಧೃತ್ಯ=ಗೂಢವಾದ (ರಹಸ್ಯವಾದ) ಅರ್ಥವನ್ನು ಹೊರತೆಗೆದು ಪ್ರದೀಪಯತಿ=ಪ್ರಕಟಪಡಿಸುತ್ತಾರೆ.

ತಾತ್ಪರ್ಯ : ನಿಗಮಾಗಮಗಳಲ್ಲಿ ಪ್ರಸಿದ್ಧವಾಗಿರುವ, ಎಲ್ಲ ಸಿದ್ಧಾಂತಗಳಿಗೆ ಶಿಖಾಮಣಿಯೋಪಾದಿಯಲ್ಲಿರುವ, ನೂರೊಂದು ಸ್ಥಲಗಳಾತ್ಮಕವಾದ ವೀರಶೈವಸಿದ್ಧಾಂತವು ಪ್ರಥಮದಲ್ಲಿ ಶ್ರೀ ಜಗದ್ಗುರು ರೇಣುಕ ಭಗವತ್ಪಾದರಿಂದ ಮಹಿಮಾಶಾಲಿಯಾದ ಶ್ರೀ ಅಗಸ್ತ್ಯಮಹರ್ಷಿಗಳಿಗೆ ಉಪದೇಶಿಸಲ್ಪಟ್ಟಿತು. ಆ ಉಪದೇಶದ ಗೂಢವಾದ ತತ್ತ್ವವನ್ನೇ ಶ್ರೀಶಿವಯೋಗಿಶಿವಾಚಾರ್ಯರು " ಸಿದ್ಧಾಂತಶಿಖಾಮಣಿ " ಎಂಬ ಗ್ರಂಥರೂಪದಲ್ಲಿ

ಬರೆದು ಪ್ರಸಿದ್ಧಪಡಿಸಿರುತ್ತಾರೆ ಎಂಬ ಅಂಶವನ್ನು ಶ್ರೀ ಮರಿತೋಂಟದಾ
ತಮ್ಮ ವ್ಯಾಖ್ಯಾನದ ಪ್ರಾರಂಭದಲ್ಲಿ ಈ ಎರಡು ಶ್ಲೋಕಗಳಲ್ಲಿ ತಿಳಿಸಿರು

"ನಿರ್ವಿಘ್ನ ಸಮಾಪ್ತಿಕಾಮೋ ಮಂಗಲಮಾಚರೇತ್" ಗ್ರ
ನಿರ್ವಿಘ್ನವಾಗಿ ಪರಿಸಮಾಪ್ತಿಯಾಗಬೇಕೆಂಬ ಅಭಿಲಾಷೆಯುಳ್ಳವನು ಗ್ರ
ರಂಭದಲ್ಲಿ ಮಂಗಲವನ್ನು ಆಚರಿಸಬೇಕೆಂಬುವದು ಶಿಷ್ಟಾಚಾರವು.

ಗ್ರಂಥಾರಂಭದಲ್ಲಿ ಶಿಷ್ಟಾಚಾರಕ್ಕನುಸಾರವಾಗಿ ಮಾಡಲ್ಪಡುವ ಮ
ಚರಣವು (೧) ವಸ್ತುನಿರ್ದೇಶರೂಪ (೨) ನಮಸ್ಕಾರರೂಪ ವ
(೩) ಆಶೀರ್ವಾದರೂಪವೆಂಬುದಾಗಿ ಮೂರುವಿಧವಾಗಿದೆ. ಗ್ರಂಥದಲ್ಲಿ ಪ್ರ
ದಿಸಲಿರುವ ವಸ್ತು (ಪರಮತತ್ತ್ವ)ವನ್ನೇ ನೇರವಾಗಿ ವರ್ಣಿಸಲು ಪ್ರಾ
ಸಿದರೆ ಅದಕ್ಕೆ ವಸ್ತುನಿರ್ದೇಶರೂಪ ಮಂಗಲವೆನ್ನುತ್ತಾರೆ. ವಿಷಯ
ಪ್ರತಿಪಾದಿಸುವ ಪೂರ್ವದಲ್ಲಿ ತನ್ನ ಇಷ್ಟದೇವತೆಗೆ ನಮಸ್ಕರಿಸು
ನಮಸ್ಕಾರರೂಪವಾದ ಮಂಗಲವು. ಇನ್ನು ಇಷ್ಟದೇವರಿಗೆ ನಮಸ್ಕಾ
ಮಾಡದೇ ಆ ಇಷ್ಟದೇವರಿಗೆ ಜಯವಾಗಲಿ ಎಂದು ಹೃದಯ ತುಂಬಿ ಹ
ವದಕ್ಕೆ ಆಶೀರ್ವಾದರೂಪವಾದ ಮಂಗಲವೆನ್ನುತ್ತಾರೆ. ಹೀಗೆ ಯಾ
ಆಸ್ತಿಕ ಗ್ರಂಥವನ್ನು ನೋಡಿದರೆ ಗ್ರಂಥಾರಂಭದಲ್ಲಿ ಈ ಮೂರರ ಪೈಕಿ ಯ
ದಾದರೊಂದು ಮಂಗಲಾಚರಣವು ಅವಶ್ಯವಾಗಿ ದೃಷ್ಟಿಗೋಚರವಾಗು

ಇದೇ ಶಿಷ್ಟಾಚಾರವಾದ ಅನುಕರಣೆಯನ್ನು ಮಾಡಿದ ಶ್ರೀ ಶಿವ
ಶಿವಾಚಾರ್ಯರಾದರೂ ತಾವು ಬರೆಯಲಿರುವ "ಸಿದ್ಧಾಂತಶಿಖಾಮ
ಎಂಬ ನೂರೊಂದು ಸ್ಥಲಗಳ ಈ ಬೃಹದ್ ಗ್ರಂಥವು ನಿರ್ವಿಘ್ನ
ಪರಿಸಮಾಪ್ತಿಗೊಂಡು ಮುಂದೆ ಶಿಷ್ಯ ಪ್ರಶಿಷ್ಯರೂಪವಾಗಿ ಜ್ಞಾನಧಾ
ಅಖಂಡವಾಗಿ ಪ್ರವಹಿಸುತ್ತಿರಲೆಂಬ ಸದುದ್ದೇಶದಿಂದ ಶಿವಶಕ್ತಿಯರ ಸ
ಭಾವ ಸಂಬಂಧವನ್ನು ಒಪ್ಪುವ ವೀರಶೈವ ಸಿದ್ಧಾಂತಕ್ಕನುಗುಣವಾಗಿ
ಶಕ್ತಿಯರಿಗೆ ನಮಸ್ಕಾರರೂಪವಾದ ಮಂಗಲಾಚರಣೆಯನ್ನು ಹನ್ನೆರಡು ಶ
ಗಳಲ್ಲಿ ಮಾಡಿರುತ್ತಾರೆ. ಈ ಮಂಗಲಾಚರಣೆಯಲ್ಲಿ ವೀರಶೈವ ಸಿ
ರಹಸ್ಯವನ್ನೇ ಅಡಗಿಸಿಟ್ಟಿರುವದು ಶ್ರೀಶಿವಯೋಗಿಶಿವಾಚಾರ್ಯರ ಅ
ಪ್ರತಿಭೆಯು ಫಲವಾಗಿದೆ. ಪ್ರಕೃತದಲ್ಲಿ ಆ ಮಂಗಲ ಶ್ಲೋಕಗಳ ರಹಸ್ಯ
ತಿಳಿಯೋಣ.

## ಶಿವಸ್ತುತಿಃ

**ತ್ರೈಲೋಕ್ಯಸಂಪದಾಲೇಖ್ಯಸಮುಲ್ಲೇಖನಭಿತ್ತಯೇ ।**
**ಸಚ್ಚಿದಾನಂದರೂಪಾಯ ಶಿವಾಯ ಬ್ರಹ್ಮಣೇ ನಮಃ ॥೧॥**

ಅರ್ಥ : ತ್ರೈಲೋಕ್ಯ=ಮೂರುಲೋಕವೆಂಬ, ಸಂಪದಾಲೇಖ್ಯ= ಸಂಪದ್ರೂಪವಾದ ಚಿತ್ರದ, ಸಮುಲ್ಲೇಖನ= ಬರವಣಿಗೆಗೆ, ಭಿತ್ತಯೇ=ಆಧಾರ ವಾದ ಗೋಡೆಯಂತಿರುವ, ಸಚ್ಚಿದಾನಂದರೂಪಾಯ=ಸತ್ತು, ಚಿತ್ತು ಮತ್ತು ಆನಂದರೂಪನಾದ, ಬ್ರಹ್ಮಣೇ=ವಿಶಾಲರೂಪನಾದ, ಶಿವಾಯ=ಪರಶಿವನಿಗೆ, ನಮಃ=ನಮಸ್ಕಾರವು.

ತಾತ್ಪರ್ಯ : ಸ್ವರ್ಗ, ಮರ್ತ್ಯ ಮತ್ತು ಪಾತಾಳಗಳೆಂದು ಶಾಸ್ತ್ರ ಗಳಲ್ಲಿ ಮೂರು ಲೋಕಗಳು ವರ್ಣಿಸಲ್ಪಟ್ಟವೆ. ಸದ್ಯಃ ನಾವು ವಾಸಿಸು ತ್ತಿರುವ ಲೋಕವು ಮರ್ತ್ಯಲೋಕವು. "ಊರ್ಧ್ವಂ ಗಚ್ಛಂತಿ ಸತ್ತ್ವಸ್ಥಾ ಅಧೋ ಗಚ್ಛಂತಿ ತಾಮಸಾಃ" ಎಂಬ ಗೀತೋಕ್ತಿಯಂತೆ ನಾವು ವಾಸಿಸು ತ್ತಿರುವ ಲೋಕದ ಮೇಲ್ಭಾಗದಲ್ಲಿರುವದು ಸ್ವರ್ಗಲೋಕವೆಂತಲೂ, ಅಧೋ-ಭಾಗದಲ್ಲಿರುವದು ಪಾತಾಳಲೋಕವೆಂತಲೂ ಪ್ರಸಿದ್ಧಿಯು. ಈ ಮೂರೂ ಲೋಕಗಳಲ್ಲಿರುವ ಚರಾಚರ ವಸ್ತುಗಳೇ ಚಿತ್ರವಿದ್ದಂತೆ. ಯಾವುದೇ ಚಿತ್ರದ ನಿರ್ಮಾಣಕ್ಕೆ ಆಧಾರವಾಗಿ ಗೋಡೆಯು ಆವಶ್ಯಕವಾದುದು. ಮೂರು ಲೋಕಗಳೆಂಬ ವಿಶಾಲವಾದ ಚಿತ್ರರಚನೆಗೆ ಪರಶಿವನೇ ಆಧಾರವಾದ ಗೋಡೆ ಯಾಗಿದ್ದಾನೆ. ಈ ಪರಶಿವನು ಸದ್ರೂಪನೂ. ಚಿದ್ರೂಪನೂ ಮತ್ತು ಆನಂದ ರೂಪನೂ ಆಗಿರುವದರಿಂದ, ಈ ಜಗತ್ತಾದರೂ ಸತ್ತಾಗಿಯೂ ಚಿತ್ತಾಗಿಯೂ ಹಾಗೂ ಆನಂದರೂಪವಾಗಿಯೂ ತೋರುತ್ತದೆ. ಚಿತ್ರಕ್ಕಿಂತಲೂ ಗೋಡೆಯು ವಿಶಾಲವಾಗಿರುವಂತೆ ಈ ಮೂರುಲೋಕಕ್ಕಿಂತಲೂ ಪರಶಿವನು ಬಹು ವ್ಯಾಪಕ ನಾಗಿದ್ದಾನೆ. ಅಂತೆಯೇ ಅವನಿಗೆ 'ಬ್ರಹ್ಮ' ಎಂದು ಕರೆದಿದ್ದಾರೆ "ಸ ಭೂಮಿಂ ವಿಶ್ವತೋ ವೃತ್ವಾऽತ್ಯತಿಷ್ಠದ್ದಶಾಂಗುಲಮ್" ಎನ್ನುವ ವೇದ ಮಂತ್ರವಾದರೂ ಪರಮಾತ್ಮನ ವ್ಯಾಪಕತೆಯನ್ನು ಸಮರ್ಥಿಸುತ್ತದೆ.

"ಶಿವ ಏಕೋ ಧ್ಯೇಯಃಸ್ಸರ್ವಮನ್ಯತ್ಪರಿತ್ಯಜ್ಯ" ಎಲ್ಲವನ್ನೂ ಬಿಟ್ಟು

ಜಗದಾಧಾರನಾದ ಪರಶಿವನೊಬ್ಬನನ್ನೇ ಧ್ಯಾನಿಸಬೇಕೆಂಬ ಶ್ರುತಿವ
ಶ್ರೀ ಶಿವಯೋಗಿಶಿವಾಚಾರ್ಯರು ಆ ಪರಾತ್ಪರ ಪರಶಿವನಿಗೆ ನ
ಗೈಯುತ್ತಾರೆ.

**ಬ್ರಹ್ಮೇತಿ ವ್ಯಪದೇಶಸ್ಯ ವಿಷಯಂ ಯಂ ಪ್ರಚಕ್ಷತೇ ।**
**ವೇದಾಂತಿನೋ ಜಗನ್ಮೂಲಂ ತಂ ನಮಾಮಿ ಪರಂ ಶಿವಮ್**

**ಅರ್ಥ :** ಬ್ರಹ್ಮೇತಿ=ಬ್ರಹ್ಮವೆಂಬ, ವ್ಯಪದೇಶಸ್ಯ=ಶಬ್ದ ವ್ಯವ
ವೇದಾಂತಿನೋ=ವೇದಾಂತಿಗಳು, ಯಂ=ಯಾವನನ್ನು, ವಿಷಯಂ=
(ಅರ್ಥ) ವನ್ನಾಗಿ, ಪ್ರಚಕ್ಷತೇ=ಹೇಳುತ್ತಾರೋ, ಜಗನ್ಮೂಲಂ=ಜ
ಮೂಲನಾಗಿರುವ, ತಂ=ಆ, ಪರಶಿವಂ=ಪರಶಿವನನ್ನು. ನಮಾಮಿ=
ತ್ತೇನೆ.

**ತಾತ್ಪರ್ಯ :** 'ಬೃಹತ್ತ್ವಾತ್ ಬ್ರಹ್ಮ' ಎಂಬ ವ್ಯುತ್ಪತ್ತಿಯ
ಎಲ್ಲಕ್ಕೂ ದೊಡ್ಡದಾದ ವಸ್ತುವನ್ನು 'ಬ್ರಹ್ಮ'ವೆಂದು ಕರೆಯುತ್ತಾರೆ.
ತೋರುವ ವಸ್ತುಗಳಲ್ಲೆಲ್ಲ ಭೂಮಿಯು ಬಹುವಿಶಾಲವಾಗಿ ತೋರುತ್ತದೆ.
ಆ ಭೂಮಿಗಿಂತಲೂ ಜಲವು ವಿಶಾಲವಾದದ್ದು. ಹೀಗೆಯೇ ವಿಚಾ
ಹೋದರೆ ಜಲಕ್ಕಿಂತಲೂ ಅಗ್ನಿಯು, ಅಗ್ನಿಗಿಂತಲೂ ವಾಯು, ವಾ
ಗಿಂತಲೂ ಆಕಾಶ ಮತ್ತು ಆಕಾಶಕ್ಕಿಂತಲೂ ಪರಮಾತ್ಮನು ವಿಶಾಲನಾಗಿ
ಅಂತೆಯೇ "ತಸ್ಮಾದ್ವಾ ಏತಸ್ಮಾದಾತ್ಮನ ಆಕಾಶಃ ಸಂಭೂತಃ, ಆ
ದ್ವಾಯುಃ, ವಾಯೋರಗ್ನಿಃ, ಅಗ್ನೇರಾಪಃ, ಅದ್ಭ್ಯಃ ಪೃಥ್ವೀ, ಪೃ
ಓಷಧಯಃ, ಓಷಧಿಭ್ಯೋಽನ್ನಂ, ಅನ್ನಾತ್ ಪ್ರಜಾಃ" ಎಂಬ ಶ್ರುತಿಯಾ
ನಿರತಿಶಯ ವ್ಯಾಪಕವಾದದ್ದು ಪರಮಾತ್ಮನೆಂಬುದಾಗಿಯೇ ವರ್ಣಿಸಿ
ಹೀಗೆ ಎಲ್ಲಕ್ಕೂ ದೊಡ್ಡವನಾದ ಆ ಪರಮಾತ್ಮನನ್ನು ವೇದಾಂತಶಾಸ್ತ್ರ
'ಬ್ರಹ್ಮ' ಎಂಬುದಾಗಿ ಕರೆಯುತ್ತಾರೆ. ಎಲ್ಲಕ್ಕೂ ವಿಶಾಲನಾಗಿ ಜ
ಉತ್ಪತ್ತಿ, ಸ್ಥಿತಿ ಹಾಗೂ ಲಯಗಳಿಗೆ ಕಾರಣೀಭೂತನಾದ ಆ ಪರ
ನಮಸ್ಕಾರವು.

**ಯಸ್ಯೋಽವಿರ್ಬುದ್ಬುದಾಭಾಸಃ ಷಟ್ತ್ರಿಂಶತ್ತತ್ತ್ವಸಂಚಯಃ ।**
**ನಿರ್ಮಲಂ ಶಿವನಾಮಾನಂ ತಂ ವಂದೇ ಚಿನ್ಮಹೋದಧಿಮ್ ।**

ಅರ್ಥ : ಷಟ್‌ತ್ರಿಂಶತ್ತತ್ವಸಂಚಯಃ=ಶಿವಾದಿ ಭೂಮ್ಯಂತಗಳಾದ ಮೂವತ್ತಾರು ತತ್ತ್ವಗಳ ಸಮೂಹವು, ಯಸ್ಯ=ಯಾವ ಶಿವನೆಂಬ ಸಮುದ್ರದ, ಊರ್ಮಿಬುದ್ಬುದಾಭಾಸಃ=ನೆರೆತೊರೆಯ ಸ್ವರೂಪವೋ, ತಂ=ಆ, ನಿರ್ಮಲಂ =ಮಲತ್ರಯರಹಿತನಾದ, ಶಿವನಾಮಾನಂ=ಶಿವನೆಂಬ ಹೆಸರಿನ, ಚಿನ್ಮಹೋದಧಿಂ=ಜ್ಞಾನಸಾಗರನನ್ನು, ವಂದೇ=ನಮಿಸುತ್ತೇನೆ.

ತಾತ್ಪರ್ಯ : ಶಿವನೇ ಮೊದಲುಗೊಂಡು ಭೂಮಿಯೇ ಕೊನೆಯದಾಗಿರುವ ಮೂವತ್ತಾರು ತತ್ತ್ವಗಳು ಯಾವ ಜ್ಞಾನಸಮುದ್ರನಾದ ಪರಶಿವನಲ್ಲಿ ನೆರೆ–ತೊರೆಗಳಂತೆ ತೋರುತ್ತಿವೆಯೋ ಅಂತಹ ನಿರ್ಮಲಸ್ವಭಾವದ ಪರಶಿವನನ್ನು ನಮಸ್ಕರಿಸುತ್ತೇನೆ.

ವಿಶೇಷ ವಿಚಾರ : ಶ್ರೀ ಶಿವಯೋಗಿಶಿವಾಚಾರ್ಯರು ಈ ಶ್ಲೋಕದಲ್ಲಿ ವೀರಶೈವಸಿದ್ಧಾಂತ ಸಮ್ಮತಗಳಾದ ಮೂವತ್ತಾರು ತತ್ತ್ವಗಳ ಉತ್ಪತ್ತಿಯ ವಿಷಯವನ್ನು ಬಹು ಸಂಗ್ರಹವಾಗಿ ನಿರೂಪಿಸಿರುತ್ತಾರೆ. ಈ ತತ್ತ್ವಗಳ ಯಥಾರ್ಥ ಜ್ಞಾನವಾಗದೇ ವೀರಶೈವಸಿದ್ಧಾಂತದ ಜ್ಞಾನವಾಗಲಾರದು. ಅಂತೆಯೇ ಈ ಪ್ರಸಂಗದಲ್ಲಿ ಆ ತತ್ತ್ವಗಳ ಸ್ವರೂಪದ ಬಗ್ಗೆ ಶಾಸ್ತ್ರೀಯವಾಗಿ ವಿಚಾರಿಸೋಣ.

ವೀರಶೈವ ಸಿದ್ಧಾಂತಾನುಸಾರವಾಗಿ ಪರಶಿವನಲ್ಲಿ ಅವಿನಾಭಾವ ಸಂಬಂಧದಿಂದ ವಿಮರ್ಶಶಕ್ತಿಯು ನಿಹಿತವಾಗಿದೆ. "ಏಕೋಽಹಂ ಬಹುಸ್ಯಾಂ ಪ್ರಜಾಯೇಯ" (ಛಾಂದೋ. ೬–೨–೩) ಎಂಬ ಶ್ರುತಿವಚನದಂತೆ ಆ ಪರಶಿವನಿಗೆ ಜಗದುತ್ಪತ್ತಿ ಮಾಡುವ ಇಚ್ಛೆಯುಂಟಾಗಲು, ಆತನ ವಿಮರ್ಶಶಕ್ತಿಯಲ್ಲಿ ಸ್ಫುರಣವಾಗಿ "ಶಿವ, ಶಕ್ತಿ, ಸದಾಶಿವ, ಈಶ್ವರ, ಶುದ್ಧವಿದ್ಯಾ, ಮಾಯಾ, ಕಲಾ, ವಿದ್ಯಾ, ರಾಗ, ಕಾಲ, ನಿಯತಿ, ಪುರುಷ, ಪ್ರಕೃತಿ, ಬುದ್ಧಿ, ಅಹಂಕಾರ, ಮನಃ, ಶ್ರೋತ್ರ, ತ್ವಕ್, ನೇತ್ರ, ಜಿಹ್ವಾ, ಘ್ರಾಣ, ವಾಕ್, ಪಾಣಿ, ಪಾದ, ಪಾಯು, ಉಪಸ್ಥ, ಶಬ್ದ, ಸ್ಪರ್ಶ, ರೂಪ, ರಸ, ಗಂಧ, ಆಕಾಶ, ವಾಯು, ಅಗ್ನಿ, ಮತ್ತು ಜಲ, ಪೃಥಿವಿ" ಗಳೆಂಬ ಮೂವತ್ತಾರು ತತ್ತ್ವಗಳು ಉತ್ಪನ್ನಗಳಾದವು.

ಪರಶಿವನಿಗೆ 'ಕೇವಲಾವಸ್ಥೆ' ಮತ್ತು 'ಲೀಲಾವಸ್ಥೆ'ಗಳೆಂದು ಎರಡು

ಅವಸ್ಥೆಗಳುಂಟು. ಕೇವಲಾವಸ್ಥೆಯಲ್ಲಿ ಪರಶಿವನು ಎಲ್ಲವನ್ನೂ ತನ್ನಲ್ಲಿ ಕೊಂಡು ತಾನೋರ್ವನೇ ಇರುತ್ತಾನೆ. "ಏಕಾಕೀ ನೈವ ರಮತೇ" ಎಂಬ ವಚನದಂತೆ ಅನಂತಕಾಲದವರೆಗೆ ತಾನೋರ್ವನೇ ಇದ್ದು ಬೇಸರಿಸಿ "ಇದಂ ಜಗತ್ ಸೃಜೇಯಮ್" ಎನ್ನುವ ಇಚ್ಛೆಯುಂಟಾಗುತ್ತ ಈ ಇಚ್ಛೆಯುಂಟಾದೊಡನೆ, ಸ್ತಬ್ಧವಾದ ಸಮುದ್ರದಲ್ಲಿ ವಾಯುವಿನ ಸಂ ವಾದೊಡನೆ ಸೂಕ್ಷ್ಮವಾದ ಕಂಪನವುಂಟಾಗುವಂತೆ, ಪರಮಾತ್ಮನಲ್ಲಿ ಚಲನೆಯುಂಟಾಗುತ್ತದೆ. ಪ್ರಾಥಮಿಕವಾದ ಈ ಈಷತ್ ಚಲನೆಯೇ ವಿ ಶಕ್ತಿ ಎನಿಸಿಕೊಳ್ಳುತ್ತದೆ. ಪರಶಿವನ ಇಚ್ಛಾಶಕ್ತಿರೂಪವಾದ ಈ ವಿ ಶಕ್ತಿಯು ಅಂತರಂಗದಲ್ಲಿ ಜ್ಞಾನಶಕ್ತಿ ಎಂತಲೂ ಮತ್ತು ಬಹಿರಂಗದಲ್ಲಿ ಕ್ರಿ ಶಕ್ತಿ ಎಂತಲೂ ವಿಕಾಸಗೊಳ್ಳುತ್ತದೆ. ಹೀಗೆ ಒಂದೇ ಆಗಿದ್ದ ಆ ವಿ ಶಕ್ತಿಯು ಇಚ್ಛಾಶಕ್ತಿ, ಜ್ಞಾನಶಕ್ತಿ ಹಾಗೂ ಕ್ರಿಯಾಶಕ್ತಿಗಳೆಂಬ ಮೂ ಆಕಾರಗಳನ್ನು ಧರಿಸುತ್ತದೆ. ಅಂತೆಯೇ ಶ್ರೀರೇಣುಕಭಗವತ್ಪಾದರು–

ಗುಣತ್ರಯಾತ್ಮಿಕಾ ಶಕ್ತಿರ್ಬ್ರಹ್ಮನಿಷ್ಠಾ ಸನಾತನೀ ।
ತದ್ವೈಷಮ್ಯಾತ್ ಸಮುತ್ಪನ್ನಾ ತಸ್ಮಿನ್ ವಸ್ತುತ್ರಯಾಭಿಧಾ ॥
(ಸಿ. ಶಿ. ೩

ಎಂಬುದಾಗಿ ಶಕ್ತಿಯ ತ್ರಿವಿಧರೂಪವನ್ನು ನಿರೂಪಿಸಿರುತ್ತಾರೆ.

ಇಲ್ಲಿ ತಿಳಿದುಕೊಳ್ಳಬೇಕಾದ ಒಂದು ದಾರ್ಶನಿಕ ರಹಸ್ಯವಿದೆ. ಏ ನೆಂದರೆ– ವಿಮರ್ಶಶಕ್ತಿಗೆ 'ಅವಿಭಾಗಪರಾಮರ್ಶದಶಾ' ಮತ್ತು 'ವಿ ಪರಾಮರ್ಶದಶಾ' ಎಂಬುದಾಗಿ ಎರಡು ಅವಸ್ಥೆಗಳುಂಟು. ಸೃಷ್ಟಿಯ ಪೂರ್ವದಲ್ಲಿ "ಮಯೂರಾಂಡರಸನ್ಯಾಯ" ದಂತೆ ಅಂದರೆ ನವಿಲಿನ ತತ್ತಿ ಮುಂದೆಹುಟ್ಟಲಿರುವ ಪಕ್ಷಿಯ ಕೈಕಾಲು ಮುಂತಾದ ಅವಯವಗಳೂ, ರೆ ನಾನಾಪ್ರಕಾರದ ಬಣ್ಣಗಳೂ, ಒಂದೇ ರಸದಲ್ಲಿ ಕಾಣದಂತೆ ಅಡಗಿರು ಜಗದುತ್ಪತ್ತಿಗೆ ಕಾರಣೀಭೂತಗಳಾದ ಇಚ್ಛಾ, ಜ್ಞಾನ ಮತ್ತು ಕ್ರಿಯಾ ಗಳು ವಿಭಾಗಹೊಂದದೇ ವಿಮರ್ಶಶಕ್ತಿಯಲ್ಲಿ ಅಡಗಿರುವಾಗ, ಆ ಸ್ಥಿತಿಯ ಅವಿಭಾಗಪರಾಮರ್ಶ ಅವಸ್ಥೆಯೆನ್ನುವರು. ಮುಂದೆ ಜಗದುತ್ಪತ್ತಿಯ ಕಾ ಆ ಇಚ್ಛಾ, ಜ್ಞಾನ ಹಾಗೂ ಕ್ರಿಯಾಶಕ್ತಿಗಳು ವಿಮರ್ಶಶಕ್ತಿಯಿಂದ

ಹೊರಟಾಗ ಅದನ್ನು ವಿಭಾಗಪರಾಮರ್ಶ ಅವಸ್ಥೆ ಎಂದು ಕರೆಯುತ್ತಾರೆ. ಶಿವಾದ್ವೈತಮಂಜರಿಯಲ್ಲಿ ಶ್ರೀ ಸ್ವಪ್ರಭಾನಂದ ಶಿವಾಚಾರ್ಯರು—

ಅನಾದಿನಿಧನಾಚ್ಛಾಂತಾಚ್ಛಿವಾತ್ ಪರಮಕಾರಣಾತ್ ।
ಇಚ್ಛಾಶಕ್ತಿರ್ವಿನಿಷ್ಕ್ರಾಂತಾ ತತೋ ಜ್ಞಾನಂ ತತಃ ಕ್ರಿಯಾ ॥
ತತೋತ್ಪನ್ನಾನಿ ಭೂತಾನಿ ಭುವನಾನಿ ಚತುರ್ದಶ ।

ಈ ರೀತಿಯಾಗಿ ತತ್ತ್ವಗಳ ಉತ್ಪತ್ತಿಯ ಪೂರ್ವದಲ್ಲಿ ಉತ್ಪನ್ನಗಳಾದ ಶಕ್ತಿಗಳ ಕ್ರಮವನ್ನು ಪ್ರತಿಪಾದಿಸಿದ್ದಾರೆ. ಈ ಶಕ್ತಿಗಳಿಂದ ಕೂಡಿಕೊಂಡೇ ಪರಶಿವಚೈತನ್ಯವು ಮೂವತ್ತಾರು ತತ್ತ್ವಗಳ ರೂಪದಲ್ಲಿ ಪರಿಣಮಿಸುತ್ತದೆ.

(೧) ಶಿವತತ್ತ್ವ—ಪೂರ್ವದಲ್ಲಿ ಹೇಳಿದ ಇಚ್ಛಾಶಕ್ತಿಯ ಅಂತರಂಗ ಭೂತವಾದ ಜ್ಞಾನಾಂಶದಲ್ಲಿ ಪ್ರವೇಶಿಸಿದ ಪರಶಿವಚೈತನ್ಯವೇ ಶಿವತತ್ತ್ವವೆಂದು ಕರೆಯಿಸಿಗೊಳ್ಳುತ್ತದೆ. ಈ ಶಿವತತ್ತ್ವವನ್ನೇ ಶಿವ, ನೀಲಕಂಠ, ತ್ರಿಲೋಚನ, ಚಂದ್ರಶೇಖರ ಮುಂತಾಗಿ ಕರೆಯುತ್ತಾರೆ. ಸಗುಣರೂಪವಾದ ಈ ಶಿವ ತತ್ತ್ವವೇ ಮುಮುಕ್ಷುಗಳಿಂದ ಉಪಾಸಿಸಲ್ಪಡುವಂಥಹದಾಗಿದೆ.

(೨) ಶಕ್ತಿತತ್ತ್ವ—ಇಚ್ಛಾಶಕ್ತಿಯ ಬಹಿರಂಗವಾದ ಕ್ರಿಯಾಂಶದಲ್ಲಿ ಪ್ರವೇಶಿಸಿದ ಚೈತನ್ಯವೇ ಶಕ್ತಿತತ್ತ್ವವು. ಇದೇ ಸದಾಶಿವಾದಿ ಭೂಮ್ಯಂತ ಗಳಾದ ೩೪ ತತ್ತ್ವಗಳಿಗೆ ಉಪಾದಾನಕಾರಣವಾಗಿರುತ್ತದೆ. ಅಂತೆಯೇ ಶಿವಯೋಗಿಶಿವಾಚಾರ್ಯರು—

ಸದಾಶಿವಮುಖಾಶೇಷತತ್ತ್ವಮೌಕ್ತಿಕಶುಕ್ತಿಕಾಮ್ ।
ವಂದೇ ಮಾಹೇಶ್ವರೀಂ ಶಕ್ತಿಂ ಮಹಾಮಾಯಾದಿರೂಪಿಣೀಮ್ ॥
(ಸಿ. ಶಿ. ೨-೨)

ಈ ರೀತಿಯಾಗಿ ಶಕ್ತಿತತ್ತ್ವದ ಉಪಾದಾನತ್ವವನ್ನು ಪ್ರತಿಪಾದಿಸಿದ್ದಾರೆ.

(೩) ಸದಾಶಿವತತ್ತ್ವ—ಶಕ್ತಿತತ್ತ್ವವು ಇಚ್ಛಾಶಕ್ತಿಯ ಅಂತರಂಗವಾದ ಜ್ಞಾನಶಕ್ತಿಯಲ್ಲಿ ಪ್ರವೇಶಿಸಿದಾಗ ನೀರಿನಲ್ಲಿ ನೆನೆಹಾಕಿದ ಕಡಲೆಯು ಉಬ್ಬಿ ಅಂಕುರೋನ್ಮುಖವಾಗುವಂತೆ ಒಂದು ವಿಲಕ್ಷಣವಾದ ಅವಸ್ಥೆಯನ್ನು ಪಡೆದು ಮುಂದೆ ಉತ್ಪನ್ನವಾಗಲಿರುವ ಪ್ರಪಂಚವನ್ನು ಕುರಿತು 'ಅಹಮಿದಂ' ನಾನು

ಈ ಪ್ರಪಂಚವು ಎಂಬ ಅಭಿಮಾನವನ್ನು ತಾಳಲು ಅದಕ್ಕೆ 'ಸದಾಶಿವತತ್ತ್ವ'ವೆನ್ನುತ್ತಾರೆ.

(೪) ಈಶ್ವರತತ್ತ್ವ—ಶಕ್ತಿತತ್ತ್ವವು ಇಚ್ಛಾಶಕ್ತಿಗೆ ಬಹಿರಂಗವಾದ ಕ್ರಿಯಾಶಕ್ತಿಯಲ್ಲಿ ಪ್ರವೇಶಿಸಿ ಉತ್ತಮ ಕ್ಷೇತ್ರದಲ್ಲಿ ಬಿತ್ತಿದ ಉತ್ತಮ ಬೀಜದಂತೆ ಅಂಕುರಿಸಿ, ಅಂಕುರಿತವಾದ ಪ್ರಪಂಚವನ್ನು ಕುರಿತು 'ಅಹಮಿದಂ' ನಾನು ಈ ಪ್ರಪಂಚವು ಎಂಬ ಅಭಿಮಾನವನ್ನು ಪಡೆಯಲು ಅದಕ್ಕೆ 'ಈಶ್ವರತತ್ತ್ವ'ವೆನ್ನುತ್ತಾರೆ.

'ಸದಾಶಿವತತ್ತ್ವ'ಕ್ಕೂ ಹಾಗೂ 'ಈಶ್ವರತತ್ತ್ವ'ಕ್ಕೂ ಇರುವ ಸೂಕ್ಷ್ಮವಾದ ಅಂತರವೇನೆಂದರೆ,— ಭೂಮಿಯಲ್ಲಿ ಬಿತ್ತಿದ ಬೀಜವುಮೊದಲು ಅಂಕುರೋನ್ಮುಖವಾಗಿ ನಂತರ ಹೇಗೆ ಅಂಕುರಿತವಾಗುತ್ತದೆಯೋ, ಅದರಂತೆ ಶಕ್ತಿತತ್ತ್ವವು ಇಚ್ಛಾಶಕ್ತಿಯ ಅಂತರಂಗವಾದ ಜ್ಞಾನಾಂಶವನ್ನು ಪ್ರವೇಶಿಸಿ ಅಂಕುರಾಯಮಾನ ಬೀಜದಂತೆ ಇದ್ದು ಸದಾಶಿವತತ್ತ್ವವೆನಿಸಿಕೊಂಡರೆ, ಕ್ರಿಯಾಂಶವನ್ನು ಪ್ರವೇಶಿಸಿದ ಅದೇ ಶಕ್ತಿತತ್ತ್ವವೇ ಅಂಕುರಿತ ಬೀಜದಂತೆ ಕ್ರಿಯಾಪ್ರಾಧಾನ್ಯದಿಂದ ಈಶ್ವರತತ್ತ್ವವೆನಿಸಿಕೊಳ್ಳುತ್ತದೆ. ಇದನ್ನು 'ನಾರಾಯಣ' ಎಂಬುದಾಗಿಯೂ ಕರೆಯುತ್ತಾರೆ.

(೫) ಶುದ್ಧವಿದ್ಯಾತತ್ತ್ವ—ಕ್ರಿಯಾಪ್ರಧಾನವಾದ 'ಇದಂ'ಹಾಗೂ ಜ್ಞಾನಪ್ರಧಾನವಾದ 'ಅಹಂ' ಇವೆರಡಕ್ಕೂ 'ಸಾಗರತರಂಗನ್ಯಾಯ'ದಿಂದ ಅಭೇದ ಜ್ಞಾನವಾಗಿ 'ಅಹಮೇವೇದಂ ಜಗತ್' ಈ ಜಗತ್ತೆಲ್ಲವೂ ನಾನೇ ಎಂಬ ಜ್ಞಾನವು ಶಕ್ತಿತತ್ತ್ವಕ್ಕೆ ಉಂಟಾಗಲು, ಆಗ ಅದು 'ಶುದ್ಧವಿದ್ಯಾತತ್ತ್ವ'ವೆನಿಸಿಕೊಳ್ಳುತ್ತದೆ. ಗುರುಗಳ ಉಪದೇಶದಿಂದ ಶಾಸ್ತ್ರಜನ್ಯವಾದ ನಿರ್ಮಲ ಜ್ಞಾನಕ್ಕೆ 'ಶುದ್ಧವಿದ್ಯೆ' ಎಂದು ಕರೆಯುವರು. ಈ ಶುದ್ಧವಿದ್ಯೆಯ ಪರಿಣಾಮವೇ ಚತುರ್ಮುಖಬ್ರಹ್ಮನು. ಇಲ್ಲಿಯವರೆಗೆ ಹೇಳಿದ ಈ ಐದು ತತ್ತ್ವಗಳಲ್ಲಿ ಶಿವಾಂಶವು ಅಧಿಕವಾಗಿರುವುದರಿಂದ ಇವುಗಳಿಗೆ ಶುದ್ಧತತ್ತ್ವಗಳೆಂದು ಕರೆಯುತ್ತಾರೆ.

(೬) ಮಾಯಾತತ್ತ್ವ—ಶುದ್ಧವಿದ್ಯಾರೂಪವಾಗಿ ಪರಿಣಮಿಸಿರುವ ಶಕ್ತಿತತ್ತ್ವದಲ್ಲಿ, ನವಿಲಿನ ತತ್ತಿಯ ರಸದಲ್ಲಿ ಪಾದ-ಪಕ್ಷ-ವರ್ಣವೈಚಿತ್ರ್ಯಾದಿಗಳು

ಅಡಕವಾಗಿರುವಂತೆ ಭಾವಿಪ್ರಪಂಚದ ಸಕಲ ಸಾಮಗ್ರಿಗಳೂ ಸೂಕ್ಷ್ಮರೂಪವಾಗಿ ಅಡಗಿರುತ್ತವೆ. ಯಾವಾಗ ಆ ಎಲ್ಲ ತತ್ತ್ವಗಳ ಪರಸ್ಪರ ಭೇದಜ್ಞಾನ ಉಂಟಾಗುತ್ತದೆಯೋ ಆಗ ಆ ಶುದ್ಧವಿದ್ಯೆಯೇ 'ಮಾಯಾತತ್ತ್ವ'ವೆನಿಸಿಕೊಳ್ಳುವದು. ಈ ಮಾಯಾತತ್ತ್ವದ ಪ್ರಭಾವದಿಂದಲೇ ಪರಮಾತ್ಮನ ಅಂಶವಾದ ಜೀವಾತ್ಮನಲ್ಲಿ 'ನಾಹಮೀಶ್ವರಃ' ನಾನು ಈಶ್ವರನಲ್ಲ ಎಂಬ ಭ್ರಮೆಯು ಉತ್ಪನ್ನವಾಗುತ್ತದೆ. ಈ ಮಾಯಾಶಕ್ತಿಯು ಪ್ರಭಾವದಿಂದಲೇ ಶುದ್ಧನಾದ ಜೀವಾತ್ಮನು 'ಸಂಸಾರಿ'ಎಂದೆನಿಸಿಕೊಳ್ಳುತ್ತಾನೆ.

(೭-೧೧) **ಕಲಾದಿಪಂಚತತ್ತ್ವಗಳು**—ಪರಮಾತ್ಮನ ಅಂಶನಾದ ಜೀವಾತ್ಮನು ಮಾಯೆಯಿಂದ ಅಪಹರಿಸಲ್ಪಟ್ಟ ಐಶ್ವರ್ಯಉಳ್ಳವನಾಗಿರುವದರಿಂದ, ಇವನ ಸರ್ವಕರ್ತೃತ್ವ, ಸರ್ವಜ್ಞತ್ವ, ಪರಿಪೂರ್ಣತ್ವ, ನಿತ್ಯತ್ವ, ವ್ಯಾಪಕತ್ವರೂಪಗಳಾದ ಶಕ್ತಿಗಳು ಸಂಕೋಚಗೊಂಡು, ಕಲಾ, ವಿದ್ಯಾ, ರಾಗ, ಕಾಲ, ನಿಯತಿಗಳಾಗಿ ಪರಿಣಮಿಸಿ ಜೀವಾತ್ಮನನ್ನು ಆವರಿಸುತ್ತವೆ. ಅಂತೆಯೇ ಇವುಗಳನ್ನು ಪಂಚಕಂಚುಕಗಳೆಂದೂ ಕರೆಯುತ್ತಾರೆ. ಜೀವಾತ್ಮನಲ್ಲಿಯ ಸರ್ವಕರ್ತೃತ್ವಶಕ್ತಿಯು ಸಂಕೋಚಗೊಂಡು ಅಲ್ಪಕರ್ತೃತ್ವವನ್ನು ಪಡೆದಾಗ 'ಕಲಾತತ್ತ್ವ'ವೆನಿಸಿಕೊಳ್ಳುವದು. ಸರ್ವಜ್ಞತ್ವಶಕ್ತಿಯು ಸಂಕುಚಿತನಾಗಿ 'ವಿದ್ಯಾತತ್ತ್ವ'ವಾಯಿತು. ಜೀವಾತ್ಮನ ಪರಿಪೂರ್ಣತ್ವವು ಸಂಕೋಚವಾಗಿ ಅಪೂರ್ಣತ್ವವನ್ನು ತಾಳಿ 'ರಾಗತತ್ತ್ವ'ವೆನಿಸಿಕೊಳ್ಳುವದು. ಈ ರಾಗದ ಪ್ರಭಾವದಿಂದಲೇ ಜೀವನು ಸ್ರಕ್-ಚಂದನ-ವನಿತಾದಿ ವಿಷಯಗಳಲ್ಲಿ ಆಸಕ್ತನಾಗುತ್ತಾನೆ. ಇನ್ನು ಜೀವಾತ್ಮನ ನಿತ್ಯತ್ವವು ಸಂಕೋಚಗೊಂಡು ಅನಿತ್ಯತ್ವವಾಗಿ ಭೂತ, ಭವಿಷ್ಯತ್ ಹಾಗೂ ವರ್ತಮಾನರೂಪವಾದ 'ಕಾಲತತ್ತ್ವ'ವನಿಸಿಕೊಳ್ಳುತ್ತದೆ. ಇದರಂತೆ ವ್ಯಾಪಕತ್ವವು ಸಂಕೋಚಗೊಂಡು ಅವ್ಯಾಪಕವಾಗಿ 'ಈ ಕಾರಣದಿಂದ ಈ ಕಾರ್ಯವೇ ಹುಟ್ಟುವದು ಬೇರೆಯದು ಹುಟ್ಟಲಾರದು' ಎಂಬ ನಿಯಮಕ್ಕೆ ಅಸಾಧಾರಣ ಕಾರಣವಾದ 'ನಿಯತಿತತ್ತ್ವ'ವೆನಿಸಿಕೊಳ್ಳುವದು. ಈ ಪಂಚಕಂಚುಕಗಳಿಂದ ಬದ್ಧನಾದ ಜೀವಾತ್ಮ (ಪುರುಷ)ನು ಸಂಸಾರದಲ್ಲಿ ಪ್ರವೃತ್ತನಾಗುತ್ತಾನೆ.

(೧೨) **ಪುರುಷತತ್ತ್ವ**—ಕಟ್ಟಿಗೆಯ ಸಂಯೋಗವಾಗಲು ಅಗ್ನಿಯಿಂದ ಸಣ್ಣಸಣ್ಣ ಕಿಡಿಗಳು ಆವಿರ್ಭವಿಸುವಂತೆ ಪರಶಿವನ ಇಚ್ಛಾಶಕ್ತಿಯು ಸಂಯೋಗದಿಂದ

ಆವಿರ್ಭವಿಸುವ ಶಿವಾಂಶವೇ ಮಾಯಾಶಕ್ತಿಯಲ್ಲಿ ಪ್ರವೇಶಿಸಿ 'ಪುರುಷತತ್ತ್ವ' ವೆನಿಸಿಕೊಳ್ಳುವದು. ಇವನಿಗೆ ಆಣವಮಲವು ಆವರಿಸಿರುವದರಿಂದ ಆತ್ಮನಲ್ಲಿ ಅನಾತ್ಮತ್ವವನ್ನು ಆರೋಪಿಸಿಕೊಂಡು 'ನಾಹಮೀಶ್ವರಃ' ನಾನು ಪರಮಾತ್ಮ ನಲ್ಲ ಎಂದು ಪರಮಾತ್ಮನಿಗಿಂತಲೂ ತನ್ನನ್ನು ಭಿನ್ನನನ್ನಾಗಿಯೂ, ಅಜ್ಞ ವನ್ನಾಗಿಯೂ ತಿಳಿದುಕೊಳ್ಳುವನಲ್ಲದೇ, ಅನಾತ್ಮವಾದ ದೇಹಾದಿಗಳಲ್ಲಿ ಆತ್ಮ ಬುದ್ಧಿಯನ್ನು ತಾಳುವನು. ಇದೇ ಪ್ರಕಾರ ಅನ್ಯೋನ್ಯಾಭಾವ ಭೇದ ಲಕ್ಷಣಾತ್ಮಕವಾದ ಮಾಯಾಮಲದಿಂದ ಆವೃತನಾಗಿ ತನ್ನನ್ನು ಹಾಗೂ ತನ್ನ ಸಂಬಂಧಪಟ್ಟವರನ್ನು ಮಾತ್ರ ಪ್ರೀತಿಸುವವನಾಗಿ ಅನ್ಯರೊಡನೆ ವೈರವನ್ನು ತಾಳುತ್ತಾನೆ. ಹೀಗೆ ಈ ರಾಗ-ದ್ವೇಷಗಳ ಮೂಲಕವಾಗಿಯೇ ಶುಭಾಶುಭ ಕರ್ಮಗಳನ್ನು ಆಚರಿಸುವವನಾಗಿ ಕಾರ್ಮಮಲದಿಂದಲೂ ಆವೃತನಾಗುತ್ತಾನೆ. ಈ ಪ್ರಕಾರವಾಗಿ ಆಣವ-ಮಾಯಾ-ಕಾರ್ಮಿಕಗಳೆಂಬ ತ್ರಿವಿಧಮಲಗಳಿಂದ ಆವೃತನಾಗಿ ಸಂಸಾರದಲ್ಲಿ ಸುಖದುಃಖಗಳನ್ನು ಅನುಭವಿಸುತ್ತ ಸಂಚರಿಸುವ ಜೀವಾತ್ಮನನ್ನು 'ಪುರುಷತತ್ತ್ವ'ವೆಂದು ಕರೆಯುವರು. ಮಾಯಾತತ್ತ್ವವನ್ನು ಮೊದಲುಗೊಂಡು ಪುರುಷತತ್ತ್ವ ಪರ್ಯಂತಗಳಾದ ಈ ಏಳು ತತ್ತ್ವಗಳನ್ನು ಶುದ್ಧಾಶುದ್ಧತತ್ತ್ವಗಳೆಂದು ಹೇಳುವರು.

(೧೩) ಪ್ರಕೃತಿತತ್ತ್ವ—ಇಲ್ಲಿಯವರೆಗೆ ಹೇಳಲ್ಪಟ್ಟ ಹನ್ನೆರಡು ತತ್ತ್ವ ಗಳು ತ್ರಿಗುಣಾತೀತಗಳು. ಪ್ರಪಂಚವಾದರೋ ತ್ರಿಗುಣಾತ್ಮಕವಾದುದು ಆದ್ದರಿಂದ ಪ್ರಪಂಚದ ಉತ್ಪತ್ತಿಗೆ ಕಾರಣೀಭೂತವಾದ ಪ್ರಕೃತಿತತ್ತ್ವದ ಬಗ್ಗೆ ವಿವರಿಸುತ್ತಾರೆ.

ಕಾರ್ಯೌನ್ಮುಖ್ಯಗರ್ಭಿತವಾದ ಇಚ್ಛಾಶಕ್ತಿಯು ತನ್ನಲ್ಲಿರುವ ಜ್ಞಾನ ಶಕ್ತಿ ಮತ್ತು ಕ್ರಿಯಾಶಕ್ತಿಗಳಲ್ಲಿ 'ಜ್ಞಾನಂ ಕ್ರಿಯಾ ನ ಭವತಿ, ಕ್ರಿಯಾ ಜ್ಞಾನಂ ನ ಭವತಿ' ಜ್ಞಾನವು ಕ್ರಿಯೆಯಾಗಲಾರದು; ಕ್ರಿಯೆಯು ಜ್ಞಾನವಾಗ ಲಾರದು, ಎಂಬ ಅನ್ಯೋನ್ಯಾಭಾವರೂಪಭೇದಬುದ್ಧಿಪ್ರಧಾನವಾದ ಮಾಯಾ ತತ್ತ್ವದಲ್ಲಿ ಪ್ರತಿಸ್ಫುರಿಸಲು 'ಪ್ರಕೃತಿತತ್ತ್ವ'ವೆನಿಸಿಕೊಳ್ಳುವದು. ಇದು ಸತ್ತ್ವ, ರಜಸ್ ಮತ್ತು ತಮೋಗುಣಗಳ ಸಾಮ್ಯಾವಸ್ಥಾರೂಪವಾಗಿರುತ್ತದೆ. ಪ್ರಪಂಚದ ರಚನೆಯಲ್ಲಿ ಇದೇ ಪ್ರಧಾನವಾಗಿರುವದರಿಂದ ಇದನ್ನು 'ಪ್ರಧಾನ

ವೆಂತಲೂ ಕರೆಯುತ್ತಾರೆ. ಈ ಪ್ರಕೃತಿತತ್ತ್ವವೇ ಬುದ್ಧಿಯೇ ಮೊದಲು ಗೊಂಡು ಪೃಥ್ವೀತತ್ತ್ವಪರ್ಯಂತಗಳಾದ ಇಪ್ಪತ್ತುಮೂರು ತತ್ತ್ವಗಳಿಗೆ ಮೂಲಕಾರಣವಾಗಿರುತ್ತದೆ.

(೧೪-೩೬) **ಮಹದಾದಿತ್ರಯೋವಿಂಶತಿತತ್ತ್ವಗಳು** — ಪ್ರಕೃತಿ ಎಂದೆನಿಸಿಕೊಂಡ ಶಕ್ತಿತತ್ತ್ವವೇ ನಿಶ್ಚಯಾತ್ಮಕವಾದ ವ್ಯವಹಾರವನ್ನು ಮಾಡುವದಾಗಿ 'ಬುದ್ಧಿತತ್ತ್ವ'ವೆನಿಸಿಕೊಳ್ಳುವದು. ಇದನ್ನೇ ಮಹತ್ ತತ್ತ್ವವೆಂತಲೂ ಕರೆಯುತ್ತಾರೆ. ಬುದ್ಧಿತತ್ತ್ವವಾದೀ ಶಕ್ತಿತತ್ತ್ವವೇ ನಾನು, ನನ್ನದು ಎಂದು ಅಭಿಮಾನಪಡುವದಾಗಿ 'ಅಹಂಕಾರತತ್ತ್ವ'ವೆಂದು ಕರೆಯಲ್ಪಡುವದು. ಅದೇ ಶಕ್ತಿತತ್ತ್ವವೇ 'ಮೋಟುಮರವೋ ಕಳ್ಳನೋ' ಮುಂತಾದ ಸಂಕಲ್ಪ-ವಿಕಲ್ಪಗಳಿಗೆ ಕಾರಣವಾದುದಾಗಿ 'ಮನಸ್ತತ್ತ್ವ'ವೆನಿಸಿಕೊಳ್ಳುವದು. ಬುದ್ಧಿ, ಅಹಂಕಾರ ಮತ್ತು ಮನಸ್ಸುಗಳೆಂಬ ಈ ಮೂರೂ ತತ್ತ್ವಗಳು ಸುಖ-ದುಃಖಾದ್ಯಾಂತರಿಕ ಪದಾರ್ಥಗಳ ವ್ಯವಹಾರಕ್ಕೆ ಅಸಾಧಾರಣ ಕಾರಣಗಳಾಗಿರುವದರಿಂದ ಇವುಗಳನ್ನು 'ಅಂತಃಕರಣ'ವೆಂದು ಕರೆಯುವರು. ಈ ಅಂತಃಕರಣವು ಇಚ್ಛಾಶಕ್ತಿಪ್ರಧಾನವಾಗಿರುವದು.

ಪೂರ್ವದಲ್ಲಿ ಹೇಳಿದ ಪ್ರಕೃತಿತತ್ತ್ವವೇ ಜ್ಞಾನಶಕ್ತಿಪ್ರಾಧಾನ್ಯದಿಂದ ಶಬ್ದಜ್ಞಾನಕ್ಕೆ ಸಾಧನವಾಗಿ 'ಶ್ರೋತ್ರತತ್ತ್ವ'ವೆಂದೂ, ಸ್ಪರ್ಶಜ್ಞಾನಕ್ಕೆ ಸಾಧನವಾಗಿ 'ತ್ವಕ್‌ತತ್ತ್ವ'ವೆಂದೂ, ರೂಪಜ್ಞಾನಕ್ಕೆ ಸಾಧನವಾಗಿ 'ನೇತ್ರತತ್ತ್ವ'ವೆಂದೂ, ರಸಜ್ಞಾನಕ್ಕೆ ಸಾಧನವಾಗಿ 'ಜಿಹ್ವಾತತ್ತ್ವ'ವೆಂತಲೂ, ಗಂಧಜ್ಞಾನಕ್ಕೆ ಸಾಧನವಾಗಿ 'ಘ್ರಾಣತತ್ತ್ವ'ವೆಂದೂ ಹೇಳಿಸಿಕೊಳ್ಳುವದು. ಈ ಐದು ಇಂದ್ರಿಯಗಳು ಶರೀರದಲ್ಲಿ ಇದ್ದು ಬಾಹ್ಯವಿಷಯಗಳ ಜ್ಞಾನಕ್ಕೆ ಸಾಧನಗಳಾಗಿರುವದರಿಂದ ಇವುಗಳನ್ನು ಬಾಹ್ಯಕರಣಗಳೆಂದು ಕರೆಯುತ್ತಾರೆ.

ಇದೇ ಪ್ರಕಾರವಾಗಿ ಆ ಪ್ರಕೃತಿತತ್ತ್ವವೇ ರಜೋಗುಣಪ್ರಾಧಾನ್ಯದಿಂದ, ಉಚ್ಚಾರಣಕ್ರಿಯೆಗೆ ಸಾಧನವಾಗಿ 'ವಾಕ್ತತ್ತ್ವ'ವೆಂದೂ, ಆದಾನ-ಪ್ರದಾನಾದಿ ಕ್ರಿಯೆಗಳಿಗೆ ಸಾಧನವಾಗಿ 'ಪಾಣಿತತ್ತ್ವ'ವೆಂದೂ, ಗಮನಾಗಮನಾದಿ ಕ್ರಿಯೆಗಳಿಗೆ ಸಾಧನವಾಗಿ 'ಪಾದತತ್ತ್ವ'ವೆಂದೂ, ಮಲಪರಿತ್ಯಾಗಕ್ಕೆ ಸಾಧನವಾಗಿ 'ಪಾಯುತತ್ತ್ವ'ವೆಂದೂ, ರೇತೋಮೂತ್ರಪರಿತ್ಯಾಗಕ್ಕೆ ಸಾಧನವಾಗಿ

‘ಉಪಸ್ಥತತ್ತ್ವ’ವೆಂತಂಲೂ ಹೇಳಿಸಿಕೊಳ್ಳುತ್ತದೆ. ಈ ಐದು ಇಂದ್ರಿಯಗಳು ಕ್ರಿಯಾಶಕ್ತಿಪ್ರಧಾನವಾಗಿರುವದರಿಂದ ಇವುಗಳನ್ನು ಕರ್ಮೇಂದ್ರಿಯಗಳೆಂದು ಕರೆಯುತ್ತಾರೆ-

ಇಲ್ಲಿಯವರೆಗೆ ಪ್ರತಿಪಾದಿಸಿದ ಬುದ್ಧಿತತ್ತ್ವವೇ ಮೊದಲುಗೊಂಡು ಉಪಸ್ಥತತ್ತ್ವ ಪರ್ಯಂತಗಳಾದ ಹದಿಮೂರು ತತ್ತ್ವಗಳಲ್ಲಿ ಅಂತಃಕರಣವು ಇಚ್ಛಾಶಕ್ತಿ ಪ್ರಧಾನವಾದುದು; ಪಂಚಜ್ಞಾನೇಂದ್ರಿಯಗಳು ಜ್ಞಾನಶಕ್ತಿ ಪ್ರಧಾನವಾದವುಗಳು ಮತ್ತು ಪಂಚಕರ್ಮೇಂದ್ರಿಯಗಳು ಕ್ರಿಯಾಶಕ್ತಿ ಪ್ರಧಾನವಾದವುಗಳೆಂದು ತಿಳಿದುಕೊಳ್ಳಬೇಕು.

ಹೀಗೆಯೇ ಆ ಪ್ರಕೃತಿತತ್ತ್ವವೇ ತಮೋಗುಣ ಪ್ರಾಧಾನ್ಯದಿಂದ ಕೇವಲ ಶ್ರೋತ್ರೇಂದ್ರಿಯಗ್ರಾಹ್ಯವಾದ ‘ಶಬ್ದತತ್ತ್ವ’ ರೂಪವಾಗಿಯೂ, ಕೇವಲ ತ್ವಗಿಂದ್ರಿಯಗ್ರಾಹ್ಯವಾದ ‘ಸ್ಪರ್ಶತತ್ತ್ವ’ ರೂಪವಾಗಿಯೂ, ಕೇವಲ ನೇತ್ರೇಂದ್ರಿಯಗ್ರಾಹ್ಯವಾದ ‘ರೂಪತತ್ತ್ವ’ವಾಗಿಯೂ, ಕೇವಲ ಜಿಹ್ವೇಂದ್ರಿಯಗ್ರಾಹ್ಯವಾದ ‘ರಸತತ್ತ್ವ’ರೂಪವಾಗಿಯೂ, ಕೇವಲ ಘ್ರಾಣೇಂದ್ರಿಯ ಗ್ರಾಹ್ಯವಾದ ‘ಗಂಧತತ್ತ್ವ’ರೂಪವಾಗಿಯೂ ಪರಿಣಮಿಸುವದು.

ಈ ಶಬ್ದ, ಸ್ಪರ್ಶ, ರೂಪ, ರಸ, ಮತ್ತು ಗಂಧಗಳು ಕ್ರಮವಾಗಿ ಧ್ವನ್ಯಾತ್ಮಕ-ವರ್ಣಾತ್ಮಕವಾಗಲಿ, ಶೀತೋಷ್ಣರೂಪವಾಗಲಿ, ನೀಲಪೀತಾದಿಯಾಗಲಿ, ಮಧುರಾಮ್ಲರೂಪವಾಗಲಿ ಮತ್ತು ಸುಗಂಧ–ದುರ್ಗಂಧ ರೂಪವಾಗಿಯೇ ಆಗಲಿ ವಿಭಾಗವಾಗಿ ತೋರದೇ ಸಾಮಾನ್ಯಗಳಾಗಿರುವದರಿಂದ ಇವುಗಳನ್ನು ಪಂಚತನ್ಮಾತ್ರೆಗಳೆಂದು ಕರೆಯುತ್ತಾರೆ. ಇವು ಅತ್ಯಂತ ಸೂಕ್ಷ್ಮವಾದವುಗಳು. ಇವುಗಳಿಂದ ಸ್ಥೂಲಗಳಾದ ಪಂಚಮಹಾಭೂತಗಳು ಉತ್ಪನ್ನಗಳಾಗುತ್ತವೆ.

ಪಂಚಮಮಹಾಭೂತಗಳ ಉತ್ಪತ್ತಿಕ್ರಮವು ಅದ್ವೈತವೇದಾಂತಕ್ಕಿಂತಲೂ ಇಲ್ಲಿ ಭಿನ್ನವಾಗಿ ಪ್ರತಿಪಾದಿಸಲ್ಪಟ್ಟಿದೆ. ಅದೆಂತೆಂದರೆ—ಮೊದಲು ತಾಮಸಾಹಂಕಾರದಿಂದ ಶಬ್ದತನ್ಮಾತ್ರವು, ಆ ಶಬ್ದತನ್ಮಾತ್ರೆಯಿಂದ ಶಬ್ದೈಕಗುಣವುಳ್ಳ ‘ಆಕಾಶತತ್ತ್ವ’ವೂ; ಆಕಾಶದಿಂದ ಸ್ಪರ್ಶತನ್ಮಾತ್ರೆಯೂ, ಪುನಃ ಆ ಸ್ಪರ್ಶತನ್ಮಾತ್ರೆಯಿಂದ ಶಬ್ದ ಹಾಗೂ ಸ್ಪರ್ಶವೆಂಬ ಎರಡು ಗುಣವುಳ

'ವಾಯುತತ್ತ್ವ'ವೂ ಉತ್ಪನ್ನವಾಯಿತು, ಈ ವಾಯುತತ್ತ್ವದಿಂದ ರೂಪ ತನ್ಮಾತ್ರೆಯೂ, ಪುನಃ ಆ ರೂಪತನ್ಮಾತ್ರೆಯಿಂದ ಶಬ್ದ, ಸ್ಪರ್ಶ ಮತ್ತು ರೂಪ ವೆಂಬ ಮೂರು ಗುಣವುಳ್ಳ 'ಅಗ್ನಿತತ್ತ್ವ'ವೂ ಉತ್ಪನ್ನವಾಯಿತು. ಈ ಅಗ್ನಿ ತತ್ತ್ವದಿಂದ ರಸತನ್ಮಾತ್ರೆಯೂ, ಪುನಃ ಆ ರಸ ತನ್ಮಾತ್ರೆಯಿಂದ ಶಬ್ದ, ಸ್ಪರ್ಶ ರೂಪ ಮತ್ತು ರಸವೆಂಬ ನಾಲ್ಕು ಗುಣವುಳ್ಳ ಜಲತತ್ತ್ವವೂ ಉತ್ಪನ್ನ ವಾಯಿತು. ಈ ಜಲತತ್ತ್ವದಿಂದ ಗಂಧತನ್ಮಾತ್ರೆಯೂ, ಪುನಃ ಆ ಗಂಧ ತನ್ಮಾತ್ರೆಯಿಂದ ಶಬ್ದ, ಸ್ಪರ್ಶ, ರೂಪ, ರಸ ಮತ್ತು ಗಂಧವೆಂಬ ಐದು ಗುಣ ವುಳ್ಳ ಪೃಥ್ವೀತತ್ತ್ವವೂ ಉತ್ಪನವಾಯಿತು.

"ತಸ್ಮಾದ್ವಾ ಏತಸ್ಮಾದಾತ್ಮನ ಆಕಾಶಃ ಸಂಭೂತಃ। ಆಕಾಶಾ-ದ್ವಾಯುಃ। ವಾಯೋರಗ್ನಿಃ। ಅಗ್ನೇರಾಪಃ ಅದ್ಭ್ಯಃ ಪ್ರಥಿವೀ" (ತೈ. ಉ. ೨-೧-೧) ಎಂಬ ಶ್ರುತಿವಾಕ್ಯದಲ್ಲಿ ಪಂಚಮಹಾಭೂತಗಳ ಉತ್ಪತ್ತಿಯ ಕ್ರಮವನ್ನು ನಿರೂಪಿಸುವಾಗ ಮಧ್ಯದಲ್ಲಿ ಪಂಚತನ್ಮಾತ್ರೆಗಳ ಹೆಸರುಗಳನ್ನು ಹೇಳಿರುವುದಿಲ್ಲ. ಆದರೂ ಉತ್ತರೋತ್ತರ ಭೂತಗಳಲ್ಲಿ ಪೂರ್ವ ಪೂರ್ವ ಭೂತಗಳ ಗುಣಗಳ ಅಸ್ತಿತ್ವವು ಕಂಡುಬರುವದರಿಂದ ಎರಡು ಭೂತ ಗಳ ಮಧ್ಯದಲ್ಲಿ ತನ್ಮಾತ್ರೆಗಳನ್ನು ಅವಶ್ಯವಾಗಿ ಕಲ್ಪಿಸಬೇಕಾಗುತ್ತದೆ.

ಹೀಗೆ ಉತ್ಪನ್ನಗಳಾದ ಸ್ಥೂಲ ಪಂಚಮಹಾಭೂತಗಳಿಂದ ಹದಿನಾಲ್ಕು ಲೋಕಗಳೂ, ಹಾಗೂ ಆಯಾ ಲೋಕಗಳಲ್ಲಿರುವ ಸಕಲ ಪ್ರಾಣಿಗಳ ಸ್ಥೂಲ ಶರೀರಗಳೂ ಮತ್ತು ತತ್ತತ್ ಶರೀರೋಚಿತಗಳಾದ ಅನ್ನ-ಪಾನಾದಿಗಳೂ ಉತ್ಪತ್ನಗಳಾಗುತ್ತವೆ.

ನಿಗಮಾಗಮ ಪ್ರಸಿದ್ಧಗಳಾದ ಶಿವತತ್ತ್ವವೇ ಮೊದಲುಗೊಂಡು ಪೃಥಿವೀತತ್ತ್ವಪರ್ಯಂತಗಳಾದ ಮೂವತ್ತಾರು ತತ್ತ್ವಗಳು ಶಕ್ತಿವಿಶಿಷ್ಟ ಪರಶಿವ ಬ್ರಹ್ಮದ ಪರಿಣಾಮರೂಪವಾಗಿರುವದರಿಂದ ವೀರಶೈವ ಸಿದ್ಧಾಂತದಲ್ಲಿ ಅವಿಕೃತಪರಿಣಾಮವಾದವನ್ನೂ, ಜಗತ್ಸತ್ಯತ್ವವಾದವನ್ನೂ ಸ್ವೀಕರಿಸುತ್ತಾರೆ.

ಈ ರೀತಿಯಾಗಿ ಶಕ್ತಿವಿಶಿಷ್ಟವಾದ ಪರಶಿವನು ಮೂವತ್ತಾರು ತತ್ತ್ವಗಳ ರೂಪದಲ್ಲಿ ಪರಿಣಾಮವನ್ನು ಹೊಂದಿ ಲೀಲಾವಿನೋದವನ್ನನುಭವಿಸುತ್ತಾನೆ. ಈ ಲೀಲಾವ್ಯಾಪಾರ ಮುಗಿದನಂತರ ತನ್ನ ಶಕ್ತಿಯನ್ನು ಸಂಕೋಚಗೊಳಿಸಿ,

ಆಮೆಯು ತನ್ನ ಅವಯವಗಳನ್ನು ಮುದುರಿಕೊಳ್ಳುವಂತೆ ಸಚರಾಚ
ಪ್ರಪಂಚವೆಲ್ಲವನ್ನೂ ತನ್ನಲ್ಲಿ ಅಡಗಿಸಿಕೊಂಡು, ತಾನೊರ್ವನೇ ಕೇವಲತ್ವ
ಯಲ್ಲಿ ಉಳಿಯುತ್ತಾನೆ-

**ಯದ್ಭಾಸಾ ಭಾಸತೇ ವಿಶ್ವಂ ಯತ್ಸುಖೇನಾನುಮೋದತೇ ।**
**ನಮಸ್ತಸ್ಮೈ ಗುಣಾತೀತವಿಭವಾಯ ಪರಾತ್ಮನೇ ॥೪**

ಅರ್ಥ: ವಿಶ್ವಂ=ಸಮಸ್ತ ಪ್ರಪಂಚವು, ಯದ್ಭಾಸಾ=ಯಾವ ಪರಶಿ
ಪ್ರಕಾಶದಿಂದ, ಭಾಸತೇ=ಪ್ರಕಾಶಿಸುತ್ತದೆಯೋ, ಯತ್ಸುಖೇನ=ಯಾವ
ಶಿವನ ಆನಂದದಿಂದ, ಅನುಮೋದತೇ=ಆನಂದಿಸುತ್ತದೆಯೋ, ಗುಣಾತೀ
ವಿಭವಾಯ=ಹೇಯ ಸತ್ತ್ವಾದಿಗುಣರಹಿತ ವೈಭವಶಾಲಿಯಾದ, ತಸ್ಮೈ
ಆ, ಪರಾತ್ಮನೇ=ಪರಮಾತ್ಮನಿಗೆ, ನಮಃ=ನಮಸ್ಕಾರವು.

ತಾತ್ಪರ್ಯ: ಪ್ರಕಾಶ ಹಾಗೂ ಆನಂದಗಳು ಪ್ರತಿಯೊಬ್ಬರಿಗೂ
ಬೇಕಾಗುವ ವಸ್ತುಗಳು. ಅವುಗಳು ಈ ಜಗತ್ತಿನಲ್ಲಿ ತೋರುವ
ರಿಂದ, ಜೀವಿಗಳು ಜಗತ್ತಿನಕಡೆಗೆ ಸಮ್ಮುಖವಾಗಿ ಸಾಗುತ್ತಲಿದ್ದಾ
ಆದರೆ ಜಗತ್ತಿನಲ್ಲಿ ತೋರುವ ಈ ಪ್ರಕಾಶ ಹಾಗೂ ಆನಂದಗ
ಜಗತ್ತಿನಲ್ಲಿಯೇ ಇರುವವುಗಳಲ್ಲ; ಕಿಂತು ಜಗತ್ತಿಗೆ ಕಾರಣೀಭೂ
ನಾದ ಪರಮಾತ್ಮನಲ್ಲಿ ಇರುವಂಥವುಗಳು. ಅಗ್ನಿಯ ಸಂಪರ್ಕದಿ
ಜಲವು ಉಷ್ಣವಾಗಿ ತೋರುವಂತೆ, ಮಧುರವಾದ ಸಕ್ಕರೆ ಮುಂತಾದ ಪದಾ
ಗಳ ಸಂಪರ್ಕದಿಂದ ಸಿಹಿಯಿಲ್ಲದ ಪದಾರ್ಥಗಳು ಸಿಹಿಯಾಗಿ ತೋರುವಂ
ಪ್ರಕಾಶ ಹಾಗೂ ಆನಂದಶೂನ್ಯವಾದ ಪ್ರಪಂಚವು ಪರಶಿವನ ಸಂಬಂಧದಿ
"ತಸ್ಯ ಭಾಸಾ ಸರ್ವಮಿದಂ ವಿಭಾತಿ", "ತಸ್ಯೈವಾನಂದಸ್ಯಾನ್ಯಾನಿ ಭೂತ
ಮಾತ್ರಾಮುಪಜೀವಂತಿ" ಎನ್ನುವ ಶ್ರುತಿವಚನಗಳ ಆಧಾರದಿಂದ, ಪ್ರ
ಮಯವಾಗಿಯೂ ಮತ್ತು ಆನಂದಮಯವಾಗಿಯೂ ತೋರುತ್ತದೆ. ಸ
ಚಿತ್ತು, ಆನಂದ, ನಿತ್ಯ ಮತ್ತು ಪರಿಪೂರ್ಣಸ್ವರೂಪನಾದ ಪರಶಿ
ಮಾಯಿಕಗಳಾದ ಸತ್ತ್ವ, ರಜಸ್ ಹಾಗೂ ತಮೋಗುಣಗಳು ಇರುವುದಿ
ಇಂತಹ ನಿರ್ಗುಣೈಶ್ವರ್ಯಸಂಪನ್ನನಾದ ಪರಶಿವನಿಗೆ ಗ್ರಂಥಕಾರರು ನಮ
ಗಳನ್ನರ್ಪಿಸುತ್ತಾರೆ.

**ಸದಾಶಿವಮುಖಾಶೇಷತತ್ತ್ವೋನ್ಮೇಷವಿಧಾಯಿನೇ ।**
**ನಿಷ್ಕಲಂಕಸ್ವಭಾವಾಯ ನಮಃ ಶಾಂತಾಯ ಶಂಭವೇ ॥೫॥**

ಅರ್ಥ : ಸದಾಶಿವಮುಖಾಶೇಷತತ್ತ್ವೋನ್ಮೇಷವಿಧಾಯಿನೇ = ಸದಾಶಿವತತ್ತ್ವವನ್ನೇ ಮೊದಲುಗೊಂಡು ಪೃಥಿವೀತತ್ತ್ವಪರ್ಯಂತಗಳಾದ ಸಕಲ ತತ್ತ್ವಗಳ ಪ್ರಾಕಟ್ಯವನ್ನು ಮಾಡುವ, ನಿಷ್ಕಳಂಕಸ್ವಭಾವಾಯ=ನಿರ್ಮಲ ಸ್ವಭಾವದ, ಶಾಂತಾಯ=ಶಾಂತನಾದ, ಶಂಭವೇ=ಪರಮಾತ್ಮನಿಗೆ, ನಮಃ= ನಮಸ್ಕಾರವು.

ತಾತ್ಪರ್ಯ : ಪರಶಿವನು ತನ್ನಲ್ಲಿ ಅವಿನಾಭಾವಸಂಬಂಧದಿಂದಿರುವ ವಿಮರ್ಶಶಕ್ತಿಯಿಂದ ಮುವತ್ತಾರು ತತ್ತ್ವಾತ್ಮಕವಾದ ಪ್ರಪಂಚವನ್ನು ಸೃಜಿಸಿ ತಾನು ಮಾತ್ರ, ಅನೇಕ ಮೋಡ, ಮಳೆ, ಧೂಳಿಗಳೆದ್ದರೂ ಆಕಾಶವು ಅವಾವುದರಿಂದಲೂ ಲಿಪ್ತವಾಗದಿರುವಂತೆ, "ಶುದ್ಧಮಾಶ್ವರಚೈತನ್ಯಮ್" ಎಂಬ ಪ್ರಮಾಣವಚನಾನುಸಾರವಾಗಿ ನಿರ್ಲಿಪ್ತನಾಗಿದ್ದು, ನಿಷ್ಕಲಸ್ವಭಾವನೂ, ಶಾಂತನೂ ಎಂದು ಕರೆಯಿಸಿಕೊಳ್ಳುತ್ತಾನೆ. ಪ್ರತಿಯೊಬ್ಬ ಜೀವಿಯೂ ಸಕಲ ದೋಷಗಳನ್ನು ನೀಗಿ ಶಾಂತಿಯನ್ನು ಪಡೆಯಬೇಕಾದರೆ ಆ ಪರಮಾತ್ಮನಿಗೇನೇ ಶರಣು ಹೋಗಬೇಕೆಂಬ ಭಾವವನ್ನು ಈ ಶಿವಯೋಗಿಶಿವಾಚಾರ್ಯರು ತಾವು ಆ ಪರಶಿವನಿಗೆ ಶರಣು ಹೊಕ್ಕು ಅನ್ಯರಿಗೆ ಮಾರ್ಗದರ್ಶನ ಮಾಡಿದ್ದಾರೆ.

**ಸ್ವೇಚ್ಛಾವಿಗ್ರಹಯುಕ್ತಾಯ ಸ್ವೇಚ್ಛಾವರ್ತನವರ್ತಿನೇ ।**
**ಸ್ವೇಚ್ಛಾಕೃತತ್ರಿಲೋಕಾಯ ನಮಃ ಸಾಂಬಾಯ ಶಂಭವೇ ॥೬॥**

ಅರ್ಥ—ಸ್ವೇಚ್ಛಾವಿಗ್ರಹಯುಕ್ತಾಯ=ತನ್ನ ಇಚ್ಛಾಶಕ್ತಿಯಿಂದ ದೇಹವನ್ನು ಧರಿಸಿದ, ಸ್ವೇಚ್ಛಾವರ್ತನವರ್ತಿನೇ=ತನ್ನ ಇಚ್ಛಾಶಕ್ತಿಯಿಂದ ತನಗೆ ಬೇಕಾದ ಆಚರಣೆಯಲ್ಲಿ ತೊಡಗಿರುವ, ಸ್ವೇಚ್ಛಾಕೃತತ್ರಿಲೋಕಾಯ=ತನ್ನ ಇಚ್ಛಾಶಕ್ತಿಮಾತ್ರದಿಂದಲೇ ಮೂರು ಲೋಕಗಳನ್ನೂ ಸೃಜಿಸಿದ, ಸಾಂಬಾಯ =ಶಕ್ತಿಯುಕ್ತನಾದ, ಶಂಭವೇ=ಪರಮಾತ್ಮನಿಗೆ, ನಮಃ=ನಮಸ್ಕಾರವು.

ತಾತ್ಪರ್ಯ—ಪರಶಿವನು ಲೀಲಾಮೂರ್ತಿಯು. ಆತನು ಸರ್ವತಂತ್ರ ಸ್ವತಂತ್ರನು. ತನಗೆ ಬೇಕಾದಾಗ ಬೇಕಾದ್ದನ್ನು ಮಾಡಬಲ್ಲನು. ಅಂತೆಯೇ "ಸ್ಥಿರೇಭಿರಂಗೈಃ ಪುರುರೂಪ ಉಗ್ರಃ" ಎಂಬ ಶ್ರುತಿವಚನದಂತೆ ಭಕ್ತಾನು

ಗ್ರಹಾರ್ಥವಾಗಿಯೂ, ತತ್ತ್ವಾತ್ಮಕ ಸೃಷ್ಟಿಗಾಗಿಯೂ, ಜ್ಞಾನಿಗಳಿಗೆ ಸಾಯುಜ್ಯಪ್ರದಾನಾರ್ಥವಾಗಿಯೂ ತಾನೇ ನಾನಾವಿಧಗಳಾದ ಲೀಲಾಮಯ ಸ್ವರೂಪಗಳನ್ನು ಧರಿಸುತ್ತಾನೆ. ಸರ್ವಜ್ಞತ್ವ. ನಿತ್ಯತೃಪ್ತತ್ವ, ಅನಾದಿ ಬೋಧತ್ವ, ಸ್ವತಂತ್ರತ್ವ, ಅಲುಪ್ತಶಕ್ತಿತ್ವ ಮತ್ತು ಅನಂತಶಕ್ತಿತ್ವಗಳೆಂಬ ಷಡ್ಗುಣೈಶ್ವರ್ಯಗಳಿಂದ ಯುಕ್ತನಾದ ಕಾರಣ ತನ್ನ ಇಚ್ಛೆಗೆ ತಡೆ ಇಲ್ಲದವನಾಗಿರುತ್ತಾನೆ. ಪರಾಶಕ್ತಿಯಿಂದ ಕೂಡಿದವನಾದ ಈ ಪರಶಿವನು ತನ್ನ ಇಚ್ಛಾಮಾತ್ರದಿಂದಲೇ ಸ್ವರ್ಗ, ಮರ್ತ್ಯ, ಪಾತಾಳಗಳೆಂಬ ಮೂರು ಲೋಕಗಳನ್ನು ಸೃಜಿಸಬಲ್ಲ ಆ ಪರಮಾತ್ಮನಿಗೆ ಅನಂತ ವಂದನೆಗಳು.

**ಯತ್ರ ವಿಶ್ರಾಮ್ಯತೀಶತ್ವಂ ಸ್ವಾಭಾವಿಕಮನುತ್ತಮಮ್ ।**
**ನಮಸ್ತಸ್ಮೈ ಮಹೇಶಾಯ ಮಹಾದೇವಾಯ ಶೂಲಿನೇ ॥೭॥**

ಅರ್ಥ : ಸ್ವಾಭಾವಿಕಂ=ಸಹಜವಾದ, ಅನುತ್ತಮಂ=ಸರ್ವಶ್ರೇಷ್ಠವಾದ ಈಶತ್ವಂ=ಒಡೆತನವು, ಯತ್ರ=ಯಾರಲ್ಲಿ, ವಿಶ್ರಾಮ್ಯತಿ=ವಿಶ್ರಮಿಸುವದೋ, ತಸ್ಮೈ=ಅಂತಹ, ಮಹೇಶಾಯ=ಮಹೇಶ್ವರನಾದ, ಶೂಲಿನೇ=ತ್ರಿಶೂಲ ಧಾರಿಯಾದ, ಮಹಾದೇವಾಯ=ಪರಮೇಶ್ವರನಿಗೆ, ನಮಃ=ನಮಸ್ಕಾರ

ತಾತ್ಪರ್ಯ : ಜಗತ್ತಿನಲ್ಲಿ ಒಬ್ಬರಮೇಲೊಬ್ಬರು ಒಡೆಯರಾಗಿರುವದನ್ನು ಕಾಣುತ್ತೇವೆ. ಪೃಥ್ವಿಯ ಸರ್ವಶ್ರೇಷ್ಠ ಒಡೆಯನಿಗೆ 'ಚಕ್ರವರ್ತಿ' ಎಂದು ಕರೆಯುತ್ತಾರೆ. ಇದೇ ಪ್ರಕಾರವಾಗಿ ಹದಿನಾಲ್ಕು ಲೋಕಗಳಿಗೆ ವಿಭಿನ್ನ ಒಡೆಯರುಂಟು. ಆದರೆ ಇವರೆಲ್ಲರ ಮೇಲೆ ಸರ್ವಶ್ರೇಷ್ಠ ಶಾಸಕನೂ ಒಡೆಯನೂ ಆದ ಪರಶಿವನು ; ಇವನಮೇಲೆ ಮತ್ತಾರೂ ಒಡೆಯರಿಲ್ಲ. ಒಡೆತನದ ಸೀಮೆಯು ಇಲ್ಲಿ ಪರಿಸಮಾಪ್ತವಾಗುತ್ತದೆ. ಅಂತೆಯೇ ಇವನನ್ನು ಮಹೇಶನೆಂತಲೂ, ಮಹಾದೇವನೆಂತಲೂ ಕರೆಯುತ್ತಾರೆ " ತಮೀಶ್ವರಾಣಾಂ ಪರಮಂ ಮಹೇಶ್ವರಮ್ " ಎಂಬ ಶ್ರುತಿವಚನವು ಇದನ್ನು ಸಮರ್ಥಿಸುತ್ತದೆ.

**ಘೃತಕಾಠಿನ್ಯಮೂರ್ತಿಸ್ಸಚ್ಚಿದಾನಂದಲಕ್ಷಣಾ ।**
**ಶಿವಾಭಿಧೇನ ಸೈವಾಸ್ತಿ ಶಿವ ಏವ ಹಿ ಸಾ ಸದಾ ॥**

ಅಂದರೆ ಹೆತ್ತ ತುಪ್ಪದಂತೆ ಮೂರ್ತವಾದ ಸಚ್ಚಿದಾನಂದಲಕ್ಷಣಲಕ್ಷಿತವಾದ ಪರವಸ್ತುವೇ 'ಶಿವ' ನೆಂಬ ಹೆಸರಿನಿಂದಿರುವದು. ಅದೇ ಶಿವನು.

